# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಆರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ಶರಣು ಸಿದ್ಧಿ ವಿನಾಯಕ ।
ಶರಣು ವಿದ್ಯಾಪ್ರದಾಯಕ ।
ಶರಣು ಪಾರ್ವತಿತನಯ ಮೂರುತಿ ।
ಶರಣು ಮೂಷಕವಾಹನ ॥
ಶರಣು ಶರಣು ॥ ॥ ಪಲ್ಲವಿ ।

ನಿಟಿಲನೇತ್ರನ ದೇವಿಸುತನೇ ನಾಗಭೂಷಣಪ್ರಿಯನೆ ।
ತಟಿಲ್ಲತಾಂಕಿತ ಕೋಮಲಾಂಗನೆ ಕರ್ಣಕುಂಡಲಧಾರನೆ ॥ ೧ ॥

ಬಟ್ಟ ಮುತ್ತಿನ ಪದಕ ಹಾರನೆ ಬಾಹುಹಸ್ತಚತುಷ್ಟನೆ ।
ಇಟ್ಟ ತೊಡುಗೆಯ ಹೇಮಕಂಕಣ ಪಾಶ ಅಂಕುಶಧಾರನೆ ॥ ೨ ॥

ಕುಕ್ಷಿಮಹಲಂಬೋದರನೇ ಇಕ್ಷುಚಾಪನ ಗೆಲಿದನೆ ।
ಪಕ್ಷಿವಾಹನ ಸಿರಿಪುರಂದರವಿಠಲನ ನಿಜದಾಸನೆ ॥ ॥ ೩ ॥

—ಪುರಂದರದಾಸರು.




ಗೌರವ ಸಂಪಾದಕರು:

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ:

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ

ಜಿ. ಎನ್. ಶ್ರೀನಿವಾಸನ್ ಎಂ.ಎ.

ಮುದ್ರಣ

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ,
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ,ಪತ್ರಿಕೆಯ-ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ



ಸಂಪುಟ ೧೩]   ಆಗಸ್ಟ್ ೧೯೮೨   [ಸಂಚಿಕೆ ೩


# ವಿಷಯಸೂಚಿ

# ಸಂಪಾದಕರ ಲೇಖನಿಯಿಂದ



ಶ್ರೀ ಪಿ ವಿ. ಆರ್ ಕೆ. ಪ್ರಸಾದ್ ಹಾಗೂ ಶ್ರೀ ಜಿ ಕುಮಾರಸ್ವಾಮಿರೆಡ್ಡಿ

ಅನುಭವಿಗಳನ್ನೆಲ್ಲ ಆಯುಷ್ಯ ಒಂದೆಡೆಯಲ್ಲಿ ಸೇರಿಸಿ ಕಾಲಪುರುಷನು ಉಂಟಾಗಿಸಿದ ಪರೀಕ್ಷೆಯಲ್ಲಿ ಅರ್ಧಗಂಟೆಗೊಬ್ಬರು, ಒಂದುಗಂಟೆಯಲ್ಲಿನ್ನೊಬ್ಬರು ಮತ್ತೊಂದು ಗಂಟೆಯಲ್ಲಿ ಮತ್ತೊಬ್ಬರು, ಮೂರು ಗಂಟೆಯೂ ಬರೆದು ಸಮಚಿತ್ತರಾಗದೆ ಹೊರಟವರು ಹಲವರಿರುವಲ್ಲಿ ತನ್ನ ಬರಹ ತಾನು ಬರೆಯುಕೊಳ್ಳುತ್ತಲೇ ಇನ್ನು ಬರೆಯದೆ ಮತ್ತೂ ಹಲವರಿಗೆ ಬರೆಯಲವಕಾಶ ನೀಡಬೇಕೆಂದು ಎಂದುಕೊಂಡಂತೆ ಒಡನೆಯೇ ಅತ್ಯುತ್ತಮ ಸ್ಥಾಯಿಯನ್ನು ಸಂಪಾದಿಸಿಕೊಂಡು ದಿಡ್ಡಿಬಾಗಿಲಿನಲ್ಲಿ ವಿಜಯ ಸ್ತಂಭವನ್ನು ಸ್ಥಾಪಿಸಿ ತಿ. ತಿ. ದೇವಸ್ಥಾನ ಕಾರ್ಯನಿರ್ವಹಣಾಧಿಕಾರಿ ಪದವಿಯಿಂದ ಮತ್ತೊಂದು ಉನ್ನತ ಹಂತಕ್ಕೇರುತ್ತಿರುವ ಮಾನವತಾವಾದಿ, ಪರಿಪಾಲನಾದಕ್ಷ, ಸಹೃದಯ, ಸಪ್ತಗಿರಿ ಗೌರವಸಂಪಾದಕರು ಆದ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಸಕುಟುಂಬವಾಗಿ ಸಕಲೈಶ್ವರ್ಯವನ್ನೂ ಹೊಂದಬೇಕೆಂದೂ ಅವರು ಅಡಿಯಿಟ್ಟಲ್ಲೆಲ್ಲಾ ಎಲ್ಲರ ಹೃದಯಗಳಲ್ಲೂ ಆನಂದ ನಂದನೋದ್ಯಾನವನ್ನು ಬೆಳೆಸಬೇಕೆಂದೂ, ಹಲವುಕಾಲ ಹಸಿರಾಗಿ ಹೊನ್ನಾಗಿ ಹೊಳೆಯಬೇಕೆಂದೂ ಶ್ರೀ ವೆಂಕಟೇಶ್ವರನನ್ನು ಬೇಡಿಕೊಳ್ಳುತ್ತ ಅವರಿಗೆ ಸಪ್ತಗಿರಿ ಬೀಳ್ಕೊಡುಗೆ ಹೇಳುತ್ತದೆ.

ಪರಿಪಾಲನಾ ದಕ್ಷರೂ, ಸಹೃದಯರೂ, ಸಾಹಿತ್ಯಪಿಪಾಸಿಗಳೂ, ಮಿಗಿಲಾಗಿ ವಯಸ್ಸನ್ನೂ ಅನುಭವವನ್ನೂ ಶೋಭಾಯಮಾನವಾಗಿ ತಿಲಕವಿಟ್ಟುಕೊಂಡಂತೆ ಪರಿಣತರಾದ ಶ್ರೀ ಜಿ ಕುಮಾರಸ್ವಾಮಿ ರೆಡ್ಡಿಯವರನ್ನು ಸಪ್ತಗಿರೀಶನು ಆಶೀರ್ವದಿಸಬೇಕೆಂದೂ, ಕಾರ್ಯನಿರ್ವಹಣಾಧಿಕಾರಿಯಾಗಿ, ಸಪ್ತಗಿರಿಯ ಗೌರವ ಸಂಪಾದಕರಾಗಿ ಅವರ ಲಾಲನೆ ಪಾಲನೆಗಳಲ್ಲಿ ತಿ. ತಿ. ದೇವಸ್ಥಾನಗಳು ಇದಕ್ಕೂ ಇಮ್ಮಿಗಿಲಾಗಿ ವರ್ಧಿಸುವುದೆಂದು ಹಾರೈಸುತ್ತ ಸಪ್ತಗಿರಿ ಇವರಿಗೆ ಸ್ವಾಗತ ಶುಭಾಕಾಂಕ್ಷೆಗಳನ್ನು ಹೇಳುತ್ತದೆ.

" ಆನೋ ಭದ್ರಾಣಿ ಯಾಂತು ಕ್ರತವೋ ವಿಶ್ವತಃ "

ತಿ. ತಿ. ದೇ. ಮುದ್ರಣಾಲಯದ ಆಫ್‌ಸೆಟ್ ವಿಭಾಗದ ಉದ್ಘಾಟನೆ ಎಡದಿಂದ. ಶ್ರೀರಾವುಲ ಸೂರ್ಯನಾರಾಯಣ ಮೂರ್ತಿ, ಶ್ರೀ ಪಿ. ವಿ ಆರ್ ಕೆ ಪ್ರಸಾದ್, ಶ್ರೀ ಎಂ ವಿಜಯಕುಮಾರ್‌ರಡ್ಡಿ

## ತಿ. ತಿ. ದೇ. ಮುದ್ರಣಾಲಯ ವಿಸ್ತರಣ

ತಿರುಮಲೆ ತಿರುಪತಿ ದೇವಸ್ಥಾನಗಳ ಮುದ್ರಣ ಶಾಲೆಯಲ್ಲಿ ಈಚೆಗೆ ಸ್ಥಾಪಿಸಲಾದ ಆಫ್‌ಸೆಟ್ ವಿಭಾಗ, ಹಾಗೂ ಫೋಟೋಕಂಪೋಸಿಂಗ್ ವಿಭಾಗದ ಉದ್ಘಾಟನೆಯನ್ನು ಜುಲೈ 3 ರಂದು ಬೆಳಗ್ಗೆ ತಿ ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ ವಿ. ಆರ್. ಕೆ. ಪ್ರಸಾದರು ನಡೆಸಿದರು. ಅತ್ಯಾಧುನಿಕ ಯಂತ್ರೋಪಕರಣಗಳ ಈ ಮುದ್ರಣಾಲಯ ಭಾರತದ ಶ್ರೇಷ್ಠ ಮುದ್ರಣಾಲಯಗಳ ಶ್ರೇಣಿಯನ್ನು ಸೇರಿತು. ಮೂರು ಆಫ್‌ಸೆಟ್ ಯಂತ್ರಗಳ ಏರ್ಪಾಡಿಗೆ ಸುಮಾರು 40 ಲಕ್ಷ ರೂಗಳು, ಐದುಭಾಷೆಗಳಲ್ಲಿ ಫೋಟೋಕಂಪೋಸಿಂಗ್ ಯಂತ್ರಗಳ ಏರ್ಪಾಡಿಗೆ ಸುಮಾರು 28 ಲಕ್ಷ ರೂ ಮತ್ತೂ ಬೈಂಡಿಂಗ್ ವಿಭಾಗದಲ್ಲಿ ಅತ್ಯಾಧುನಿಕ ರೀತಿಯ ಫೋಲ್ಡಿಂಗ್, ಗ್ಯಾದರಿಂಗ್, ತ್ರೀಸೈಡ್ಸ್ ಕಟಿಂಗ್‌ಯಂತ್ರಗಳು – ಎಲ್ಲವೂ ಸೇರಿ ಒಂದು ಕೋಟಿ ರೂಗಳ ವೆಚ್ಚದಲ್ಲಿ ಮುದ್ರಣಾಲಯದ ಆಧುನಿಕೀಕರಣ ನಡೆಯಿತು.

ತಿ. ತಿ ದೇ. ಪ್ರಕಟನಶಾಖೆಯ ಪ್ರಧಾನ ಸಂಪಾದಕ ವಿದ್ವಾನ್ ವಿಶ್ವಂ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಆರಂಭೋತ್ಸವ ಸಭೆಯಲ್ಲಿ ಶ್ರೀ ಪಿ ವಿ. ಆರ್ ಕೆ. ಪ್ರಸಾದರು ಮಾತನಾಡುತ್ತ ತಿ. ತಿ ದೇ ಪ್ರಕಟನ ಶಾಖೆ ಕಳೆದ ಮೂರು ವರ್ಷಗಳಲ್ಲಿ 200 ಕ್ಕೂ ಮಿಕ್ಕಿ ಧಾರ್ಮಿಕ ಪುಸ್ತಕಗಳನ್ನು ಪ್ರಕಟಿಸಿದೆಯೆಂದು ತಿಳಿಸಿದರು

ತಿ. ತಿ. ದೇ. ಮುದ್ರಣಾಲಯದ ಬೆಳವಣಿಗೆಯ ಸಂಕ್ಷಿಪ್ತ ವರದಿಯನ್ನು ಮುದ್ರಣಾಲಯದ ಅಸಿಸ್ಟೆಂಟ್ ಮೇನೇಜರ್ ಶ್ರೀ ಪಿ. ಮೋಹನರಾವ್ ಅವರು ಓದಿದರು. ಸಭೆಯನ್ನು ತಿ.ತಿ.ದೇ. ಪ್ರಕಟನ ಶಾಖೆಯ ಪರ್ಯವೇಕ್ಷಕ ಶ್ರೀ ಎಂ. ರಾಮಕೃಷ್ಣ ಶಾಸ್ತ್ರಿ ಅವರು ಸ್ವಾಗತಿಸಿದರು ಮುದ್ರಣಾಲಯದ ಮೇನೇಜರ್ ಶ್ರೀ ಎಂ ವಿಜಯಕುಮಾರರೆಡ್ಡಿ ಅವರು ತಿ. ತಿ. ದೇ ಮುದ್ರಣಾಲಯದ ಈ ಹೊಸ ಅಭಿವೃದ್ಧಿಯಲ್ಲಿ ಕಾರ್ಯನಿರ್ವಹಣಾಧಿಕಾರಿಗಳ ಪ್ರಮುಖ ಪಾತ್ರವನ್ನು ವಿವರಿಸಿದರು.

ಆಫ್‌ಸೆಟ್ ವಿಭಾಗದಲ್ಲಿ ಶ್ರೀ ಪಿ ವಿ. ಆರ್ ಕೆ. ಪ್ರಸಾದರ ತೈಲಚಿತ್ರವನ್ನು ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯ ನಾರಾಯಣ ಮೂರ್ತಿ ಅವರು ಅನಾವರಣಗೊಳಿಸಿದರು

# ವಾರ್ತಾಲಹರಿ

## ಕೃತಕ ಅವಯವ ವಿತರಣೆ

ಕಳೆದ ಜೂನ್ 26 ರಂದು ತಿ. ತಿ. ದೇ. ಕೇಂದ್ರ ಆಸ್ಪತ್ರೆಯಲ್ಲಿ ನಡೆದ ಸರಳ ಸಮಾರಂಭವೊಂದರಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ ವಿ ಆರ್ ಕೆ. ಪ್ರಸಾದರು 50 ಮಂದಿ ಅಂಗವಿಕಲರಿಗೆ ಕೃತಕ ಕಾಲುಗಳನ್ನು ನೀಡಿದರು ಕೃತಕ ಅವಯವ ಕೇಂದ್ರ ಸ್ಥಾಪನೆ ಆದ ನಂತರ ಅವಯವ ವಿತರಣೆ ನಡೆಯುತ್ತಿರುವುದು ಮೂರನೆಯ ಬಾರಿಗ. ತಿ. ತಿ ದೇ. ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ಟಿ. ಎಸ್. ಎಸ್. ಎನ್. ರಾಜು ಅವರ ಅಧ್ಯಕ್ಷತೆಯಲ್ಲಿ ನಡೆದ ಈ ವಿತರಣಾ ಸಭೆಯಲ್ಲಿ ವರದಿಯನ್ನು ಓದುತ್ತ ತಿ. ತಿ. ದೇ. ಆರೋಗ್ಯಾಧಿಕಾರಿ ಡಾ॥ ವೈ. ಆರ್. ಧನಲಕ್ಷ್ಮಿ ಅವರು ಇದುವರೆಗೆ 47000 ರೂಗಳ ವೆಚ್ಚದಲ್ಲಿ 120 ಮಂದಿಗೆ ಕೃತಕ ಅವಯವಗಳನ್ನು ನೀಡಲಾಗಿದೆಯೆಂದು ತಿಳಿಸುತ್ತ, ಕೇಂದ್ರದ ಸಂಚಾಲಕ ಶ್ರೀ ಸಿ. ಎಂ. ರಾಜು ಅವರನ್ನು ಅವರ ಸಮರ್ಪಣಾಭಾವದ ಸೇವೆಗಾಗಿ ಶ್ಲಾಘಿಸಿದರು. ಶ್ರೀ ಪ್ರಸಾದರು ಮಾತನಾಡುತ್ತ 'ಕೇಂದ್ರ ಯಶಸ್ವಿಯಾಗಿ ಕೆಲಸ ನಿರ್ವಹಿಸುತ್ತಿರುವುದು ತಮಗೆ ಆನಂದವನ್ನುಂಟುಮಾಡಿದೆ' ಎಂದು ತಿಳಿಸಿದರು ಮುಂದುವರೆದು 'ಕೃತಕ ಅವಯವ ಪಡೆದ ಕುಶಲ ಕೆಲಸಗಾರರಿಗೆ ತಿ ತಿ ದೇ ಗಳಲ್ಲಿ ಜೀವನೋಪಾಯವನ್ನು ಕಲ್ಪಿಸಲಾಗಿದೆಯೆಂದೂ, ಹಲವರನ್ನು ಕೃತಕ ಅವಯವ ಕೇಂದ್ರದಲ್ಲಿಯೇ ಕಾರ್ಯನಿರತರನ್ನಾಗಿಸಲಾಗಿದೆಯೆಂದೂ' ತಿಳಿಸುತ್ತ ಅವರು 'ಕೃತಕ ಕೈಗಳು, ಕ್ರಚ್‌ಗಳ ನಿರ್ಮಾಣವನ್ನು ಸಧ್ಯದಲ್ಲೇ ಆರಂಭಿಸಲಾಗುವುದೆಂದೂ, ಕೃತಕ ಅವಯವ ದಾನನಿಧಿಗೆ ಸಾರ್ವಜನಿಕರು ಉತ್ಸಾಹದಿಂದ ಮುಂದೆ ಬಂದು ದಾನ ನೀಡಬೇಕೆಂದೂ, ಕರೆನೀಡಿದರು

ಕಾರ್ಯನಿರ್ವಹಣಾಧಿಕಾರಿಯವರು ಕೃತಕ ಅವಯವಗಳನ್ನು ಪಡೆದವರ ಹೊಸ ಅನುಭವಗಳನ್ನು ಕೇಳಿ ತಿಳಿದುಕೊಂಡರು. ಸಭೆಯು ಅಂಗವಿಕಲರಿಗೆ ಲಘು ಉಪಹಾರ ನೀಡುವಿಕೆಯಿಂದ ಮುಕ್ತಾಯವಾಯಿತು.

## ವರದಾಚಾರ್ಯರಿಗೆ ಸನ್ಮಾನ

ಹಿರಿಯ ಪತ್ರಕರ್ತ ಶ್ರೀ ವರದಾಚಾರ್ಯರನ್ನು 7–7–82ರಂದು ಬೆಳಗ್ಗೆ ಅವರ ನಿವೃತ್ತಿಯ ಸಂದರ್ಭದಲ್ಲಿ ಸನ್ಮಾನಿಸಲಾಯಿತು ತಿರುಪತಿಯ ರಾಮನಗರದಲ್ಲಿ ನಡೆದ ಸರಳ ಸಮಾರಂಭದಲ್ಲಿ ಶ್ರೀಯುತರನ್ನು ಸನ್ಮಾನಿಸುತ್ತ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಉಪಕುಲಪತಿ ಶ್ರೀ ಎಂ. ರಾಮರಾವ್. ಹಿನ್ನೆಲೆಯಲ್ಲಿ ಶ್ರೀ ಪಿ. ವಿ. ಆರ್ ಕೆ, ಪ್ರಸಾದ್.

# ಗುರುವಾಯೂರು ಶ್ರೀಕೃಷ್ಣ

ಪುಣ್ಯಕ್ಷೇತ್ರಗಳಿಗೆ ಪ್ರಸಿದ್ಧಿ ಪಡೆದ ದೇಶ ಭಾರತ. ಭಾರತದ ಸಂಸ್ಕೃತಿಗೆ ಆಧ್ಯಾತ್ಮಿಕತೆಯೇ ಬೆನ್ನೆಲುಬು. ಇಂತಹ ಪ್ರಾಚೀನ ಭಾರತದ ಸುಸಂಸ್ಕೃತಿಗೆ ಜಗತ್ತೇ ಮಾರುಹೋಗಿತ್ತು. ಇಂದಿಗೂ ಭಾರತೀಯ ಸಂಸ್ಕೃತಿಯ ಕಡೆಗೆ ವಿಶ್ವದ ಎಲ್ಲ ರಾಷ್ಟ್ರಗಳೂ ದೃಷ್ಟಿ ಹಾಯಿಸುತ್ತವೆ. ಇಂತಹ ಜಗದ್ವಿಖ್ಯಾತ ಸಂಸ್ಕೃತಿ ಸಂಪನ್ನತೆಗೆ ಕಾರಣಭೂತವಾಗಿರುವುದು ಇಲ್ಲಿನ ಕ್ಷೇತ್ರ ವೈಭವವೆಂದು ಬೇರೆ ಹೇಳಬೇಕಾಗಿಲ್ಲ. ಹಿಮಾಚಲದಿಂದ ಕನ್ಯಾಕುಮಾರಿಯವರೆಗೂ ಹಬ್ಬಿರುವ ಹಲವಾರು ಪುಣ್ಯ ಕ್ಷೇತ್ರಗಳಲ್ಲಿ ಶ್ರೀ ಗುರುವಾಯೂರು ಕ್ಷೇತ್ರವೂ ಒಂದು. ಇದು ಕೇರಳ ರಾಜ್ಯದ ತ್ರಿಚೂರು ಜಿಲ್ಲೆಯಲ್ಲಿದೆ.

ಭಾರತದ ಅಸಂಖ್ಯದೇವಾಲಯಗಳಲ್ಲಿ ಇದೂ ಒಂದು ಎನ್ನಬಹುದಾದರೂ, ನಿಜವಾಗಿ ನೋಡಿದರೆ ಇದರ ವೈಶಿಷ್ಟ್ಯವು ಅಷ್ಟೇ ಅಲ್ಲ. ಇದು ಕೇವಲ ಒಂದು ಕ್ಷೇತ್ರವಲ್ಲ; ಸಾಕ್ಷಾತ್ "ಭೂಲೋಕ ವೈಕುಂಠ" ವೆಂಬುದು ಇಂದಿಗೂ ಭಕ್ತಜನರ ಅನುಭವಕ್ಕೆ ಬರುತ್ತಿರುವ ಸಂಗತಿಯಾಗಿದೆ. ಕಲಿಕಾಲದ ಜನರಭಾಗ್ಯವೆಂಬಂತೆ, ಅವರ ಉದ್ಧಾರಕ್ಕಾಗಿ, ಜೀವಕಾರುಣ್ಯದಿಂದ ಪ್ರತ್ಯಕ್ಷವಾಗಿ ಶೋಭಿಸುವ ಸಚ್ಚಿದಾನಂದಮಯ ಪರಬ್ರಹ್ಮ ಸ್ವರೂಪನಾದ ಭಗವಂತನು ಲೀಲೆಯಾಡುವ ದಿವ್ಯ ಸನ್ನಿಧಾನವೆಂಬುದು ಮಹಾತ್ಮರ ಸಿದ್ಧಾಂತ. ಅದನ್ನೇ "ನಾರಾಯಣೀಯಂ" ಕರ್ತೃ ನಾರಾಯಣಭಟ್ಟಪಾದರು, "ತತ್ರಾತ್ತವದ್ಭಾತಿ ಸಾಕ್ಷಾತ್ ಗುರುಪವನಪುರೇ ಹಂತಭಾಗ್ಯಂ ಜನಾನಾಂ" ಎಂದು ಉದ್ಘೋಷಿಸಿರುವರು. ಅತುಲವಾದ ಭಗವಚ್ಚೈತನ್ಯವು ಹೊರಹೊಮ್ಮುತ್ತಿರುವ ಕ್ಷೇತ್ರವು ಇದೊಂದೇ ಎಂದು ನಿಸ್ಸಂದೇಹವಾಗಿ ಹೇಳಬಹುದು. ಎಂತಹ ಮನೋವ್ಯಥೆಯಿಂದ ಕೊರಗುವವರೂ ಇಲ್ಲಿ ಬಂದು ದರ್ಶನ ಪಡೆದ ಕೂಡಲೇ ಮನಶ್ಶಾಂತಿಯನ್ನು ಹೊಂದಿ ಹಿಂತಿರುಗುವುದೂ, ಮುಂದೆ ಉತ್ತರೋತ್ತರ ಅಭಿವೃದ್ಧಿ ಹೊಂದುವುದೂ ಇದಕ್ಕೆ ಸಾಕ್ಷಿಯಾಗಿವೆ. ಎಲ್ಲೂ ಪರಿಹಾರ ದೊರೆಯದ ಸಮಸ್ಯೆಗಳಿಗೆ ಇಲ್ಲಿ ಪರಿಹಾರ ದೊರೆಯುವುದು. ಲೋಕಾನುಗ್ರಹ ತತ್ಪರನಾಗಿ, ಭಕ್ತಾಭೀಷ್ಟಪ್ರದನಾಗಿ ಭಗವಂತನ ಇಲ್ಲಿ ಪ್ರತ್ಯಕ್ಷ ಬೆಳಗುತ್ತಿರುವನು. "ಅನುಗ್ರಹವಲ್ಲದೆ ನಿಗ್ರಹವೆಂಬುದಿಲ್ಲ" ಎಂಬುದಾಗಿ ಈ ಪರಮಾತ್ಮನ ಕಾರುಣ್ಯ ಮತ್ತು ಗುಣಗಣಗಳನ್ನು ಮಹಾತ್ಮರಾದ ಭಕ್ತರು ವರ್ಣಿಸುವುದರಲ್ಲಿ ಅತಿಶಯೋಕ್ತಿ ಇಲ್ಲ ಒಮ್ಮೆ ಈ ಕರುಣಾಮೂರ್ತಿಯ ದರ್ಶನ ಪಡೆಯುವುದು ಪುಣ್ಯಫಲವೆಂಬುದರಲ್ಲಿ ಸಂದೇಹವಿಲ್ಲ. ಭಕ್ತರು ತನ್ನಿಂದ ಅಪೇಕ್ಷಿಸಿದ ಫಲವನ್ನೀಯುವುದು ಮಾತ್ರವಲ್ಲದೆ, ಎಂದೆಂದೂ ಅವರ ಕೈಬಿಡದೆ, ಸಂಸಾರದಿಂದಲೇ ಅವರನ್ನು ಉದ್ಧರಿಸುವ ಶ್ರೀ ಗುರುವಾಯುಪುರೇಶನ ಮಹಿಮಾತಿಶಯವನ್ನು, ಭಕ್ತವಾತ್ಸಲ್ಯವನ್ನು, ಕಾರುಣ್ಯವನ್ನು ವರ್ಣಿಸುವುದಸಾಧ್ಯ

ಈ ರೀತಿಯ ವಿಶೇಷ ಮಹತ್ವಗಳಿಲ್ಲಿ ಕಂಡುಬರಲು ಕಾರಣವೇನೆಂದು ಪ್ರಶ್ನಿಸಿದರೆ ಅದು ಭಗವಂತನ ಕಾರುಣ್ಯವೆಂದೇ ಒಂದು ಮಾತಿನಲ್ಲಿ ಉತ್ತರಿಸಬಹುದು. ಆದರೂ ಇದಕ್ಕೆ ಹಿನ್ನೆಲೆಯಾಗಿರುವ ಇತರ ಕೆಲವೊಂದು ಸಂಗತಿಗಳನ್ನು ತಿಳಿಯುವುದು ಅವಶ್ಯಕ

---

ಶ್ರೀಮತಿ ಸಿ. ಎಚ್. ಲಕ್ಷ್ಮಿ

---

ಅಂಜನಶಿಲೆಯ ಮನೋಹರವಾದ ಪುಟ್ಟ ವಿಷ್ಣು ವಿಗ್ರಹ. ಅದು ಮನುಷ್ಯ ನಿರ್ಮಿತವಲ್ಲ. ಸಾಕ್ಷಾತ್ ಆದಿನಾರಾಯಣನು ಬ್ರಹ್ಮನಿಗೆ ಪೂಜಿಸಲು ಅನುಗ್ರಹಿಸಿದ ವಿಗ್ರಹ. ಬ್ರಹ್ಮನಿಂದ ಪೃಶ್ನಿಗರ್ಭನಿಗೆ, ಆತನಿಂದ ಕಶ್ಯಪ–ಅದಿತಿಯರಿಗೆ, ಅವರಿಂದ ವಸುದೇವ–ದೇವಕಿಯರಿಗೆ ಅನುಕ್ರಮವಾಗಿ ಕೊಡಲ್ಪಟ್ಟು, ಅವರಿಂದ ಪೂಜಿತವಾದ ದಿವ್ಯ ವಿಗ್ರಹ. ಕೃಷ್ಣಾವತಾರವು ಕೊನೆಗೊಳ್ಳಲಿರುವ ವೇಳೆಯಲ್ಲಿ ಶ್ರೀಕೃಷ್ಣನು ಉದ್ಧವನನ್ನು ಕರೆದು, ಕಲಿಯುಗದ ಜನರ ರಕ್ಷಣೆಗಾಗಿ ಈ ದಿವ್ಯ ವಿಗ್ರಹವನ್ನು ಗುರು ಮತ್ತು ವಾಯು ಸೇರಿ, ಪುಣ್ಯ ಪ್ರದೇಶವೊಂದರಲ್ಲಿ ಪ್ರತಿಷ್ಠಿಸುವಂತೆ ಸಂದೇಶವಿತ್ತನು. ಪರಮಾತ್ಮನ ಆದೇಶದಂತೆ, ದ್ವಾರಕೆಯು ಪ್ರಳಯ ಜಲದಲ್ಲಿ ಮುಳುಗುತ್ತಿರುವಾಗ, ದೇವಗುರು ಬೃಹಸ್ಪತಿ ಹಾಗೂ ವಾಯು ಈ ವಿಗ್ರಹವನ್ನು ತೆಗೆದುಕೊಂಡು, ಯೋಗ್ಯಸ್ಥಳವನ್ನರಸಿ ಪ್ರತಿಷ್ಠೆ ಮಾಡಿದರು. ಗುರು, ವಾಯು ಸೇರಿ ಪ್ರತಿಷ್ಠೆ ಮಾಡಿದ ಕಾರಣ "ಗುರುವಾಯೂರ್" ಎಂಬ ಹೆಸರು ಬಂದಿತು, ಅಧಿಪತಿಯಾದ ದೇವರು "ಗುರುವಾಯುಪುರೇಶ" "ಗುರುವಾಯೂರಪ್ಪ", "ವಾತಾಲಯೇಶ", "ಪವನಪುರೇಶ" ಇತ್ಯಾದಿ ಅನೇಕ ನಾಮಧೇಯಗಳಿಂದ ಭಕ್ತಪ್ರಿಯನಾದನು. ಹೀಗೆ, ವಿಗ್ರಹ, ಪ್ರತಿಷ್ಠೆಗಳು ಇಲ್ಲಿನ ಮಹಿಮೆಗೆ ಕಾರಣಗಳಾಗಿವೆ ಎನ್ನಬಹುದು

ಗುರು ಮತ್ತು ವಾಯು ಭಗವದ್ವಿಗ್ರಹವನ್ನು ಪ್ರತಿಷ್ಠಿಸಲು ಯೋಗ್ಯ ಸ್ಥಳವನ್ನು ಅರಸುತ್ತಾ ಹೋಗುತ್ತಿರಲು, ಪರಶುರಾಮ ಸೃಷ್ಟಿಯ ದಕ್ಷಿಣ ಭಾಗದಲ್ಲಿ, ಸಜ್ಜನರೂ, ಸದಾಚಾರ ಸಂಪನ್ನರೂ ಆದ ಶ್ರೇಷ್ಠರಿಂದ ಆವೃತವಾದ ಒಂದು ಸ್ಥಳವು ಗೋಚರಿಸಿತು. ಅಲ್ಲಿ ವಿಶಾಲವಾದ ಸರೋವರವೊಂದಿತ್ತು ಭಾಗವತದಲ್ಲಿ ವರ್ಣಿಸಿರುವ 'ನಾರಾಯಣ ಸರೋವರ'ವೇ ಅದಾಗಿತ್ತು. ಸಾಕ್ಷಾತ್ ಪಾರ್ವತೀಪರಮೇಶ್ವರರು ಅಲ್ಲಿ ಜಲಕ್ರೀಡೆಯಾಡುತ್ತಿದ್ದರು ಸನಿಹದಲ್ಲೇ ಅವರ ನಿವಾಸವೂ ಇದ್ದಿತು. ಆ ದಾರಿಯಾಗಿ ಬರುತ್ತಿರುವ ಬೃಹಸ್ಪತಿ ಮತ್ತು ವಾಯುಗಳನ್ನು ಕರೆದು – ದೈವ ಪ್ರೇರಣೆಯೆಂಬಂತೆ ಈಶ್ವರನು "ಭಗವಂತನ ವಿಗ್ರಹವನ್ನು ಸ್ಥಾಪಿಸಲು ಇದೇ ಯೋಗ್ಯ ಸ್ಥಳ. ಅದಕ್ಕಾಗಿ ನಾವು ಈ ಸ್ಥಳವನ್ನು ಬಿಟ್ಟು ಕೊಡುತ್ತೇವೆ. ಇಲ್ಲಿಂದ ತುಸು ದೂರದಲ್ಲಿ ನಾವು ನೆಲೆಸುವೆವು" ಎಂದು ತಿಳಿಸಿದನು. ಸಂತೋಷಗೊಂಡ ಗುರು ಮತ್ತು ವಾಯು ಆ ದಿವ್ಯ ವಿಗ್ರಹವನ್ನು ಅಲ್ಲಿ ಸ್ಥಾಪಿಸಿದರು. ಕೂಡಲೇ ದೇವಶಿಲ್ಪಿಯಾದ ವಿಶ್ವಕರ್ಮನು ಸುಂದರವಾದ ದೇವಾಲಯವನ್ನು ಶಾಸ್ತ್ರೀಯವಾಗಿ ನಿರ್ಮಿಸಿದನು. ಮುಂಭಾಗದ ಬೀದಿಯಲ್ಲಿ ಬಹುದೂರದವರೆಗೂ ಪರಮಾತ್ಮನ ದಿವ್ಯಮಂಗಳ ವಿಗ್ರಹವು ಕಾಣಿಸುವಂತೆ, ವಿಶಿಷ್ಟ ರೀತಿಯಲ್ಲಿ, ದ್ವಾರಗಳು ರಚಿತವಾಗಿವೆ. ಈಗ ಗುರುವಾಯೂರು ದೇವಾಲಯದ ಬಡಗು ಬಾಗದಲ್ಲಿರುವ ವಿಶಾಲವಾದ ದೇವಾಲಯದ ಕೊಳವೇ ಶಿವ-ಪಾರ್ವತಿಯರು ಜಲಕ್ರೀಡೆಯಾಡುತ್ತಿದ್ದ, ಹಾಗೂ ಹಿಂದೆ ಪ್ರಚೇತಸ್ಸುಗಳು ತಪಸ್ಸು ಮಾಡಿದ ನಾರಾಯಣ ಸರಸ್ಸು ಎಂದು ನಂಬಲಾಗಿದೆ. ಶಿವಪಾರ್ವತಿಯರು ಹೋಗಿ ನೆಲೆಸಿದ ಸ್ಥಳವೇ ಇಂದಿನ "ಮಮ್ಮಿಯೂರ್" ಕ್ಷೇತ್ರವೆಂದು ಸ್ಥಳ ಪುರಾಣ ತಿಳಿಸುತ್ತದೆ. ಗುರುವಾಯೂರಿಗೆ ಹೋದವರು ಮಮ್ಮಿಯೂರಿನ ಮಹಾದೇವನನ್ನೂ ದರ್ಶನಮಾಡಬೇಕೆಂಬುದು ವಾಡಿಕೆ. ಹೀಗೆ ಸ್ಥಳ ಕ್ಷೇತ್ರ ನಿರ್ಮಾಣಗಳೂ ವೈಶಿಷ್ಟ್ಯದಿಂದ ಕೂಡಿದ್ದೂ ಮಹತ್ವ ಪೂರ್ಣವೂ ಆಗಿವೆ.

ಒಂದು ಕ್ಷೇತ್ರದ ಪವಿತ್ರತೆ ಹಾಗೂ ಭಗವಚ್ಚೈತನ್ಯದ ಪ್ರಕಾಶಕ್ಕೆ ಅಲ್ಲಿನ ಪೂಜಾವಿಧಿಗಳು, ನಿಯಮ ನಿಷ್ಠೆಗಳೂ ಬಹುಮಟ್ಟಿಗೆ ಕಾರಣವೆನ್ನ

ಬಹುದು. ಈ ದೃಷ್ಟಿಯಿಂದಲೂ ಗುರುವಾಯೂರಿನ ವೈಶಿಷ್ಟ್ಯ ಗಮನಾರ್ಹವಾಗಿದೆ. ಮುಂಜಾನೆ ಮೂರುಗಂಟೆಯಿಂದ ರಾತ್ರಿ ಹತ್ತುಗಂಟೆಯ ವರೆಗೂ ದೈನಂದಿನ ಪೂಜಾವಿಧಿಗಳು ಕ್ರಮಬದ್ಧವಾಗಿ ನಡೆಯುತ್ತವೆ. ಬ್ರಾಹ್ಮೀ ಮುಹೂರ್ತದಲ್ಲಿ, ಅಂದರೆ ಮುಂಜಾವ ಮೂರುಗಂಟೆಯ ವೇಳೆಗೆ ಕದಗಳು ತೆರೆಯಲ್ಪಡುತ್ತವೆ. ಆ ಪ್ರಥಮ ದರ್ಶನವೇ "ನಿರ್ಮಾಲ್ಯದರ್ಶನ", ಅದು ಬಹಳ ಪುಣ್ಯಪ್ರದವೆಂದು ಪ್ರತೀತಿ ಭಕ್ತಜನರು ಮೂರು ಗಂಟೆಯ ಮೊದಲೇ ಎದ್ದು ಸ್ನಾನಮಾಡಿ ಬಂದು ನಿರ್ಮಾಲ್ಯದರ್ಶನಕ್ಕಾಗಿ ಕಾದಿರುತ್ತಾರೆ. ಅವರ ನಾಮಘೋಷದಿಂದ ವಾತಾವರಣವು ಪವಿತ್ರವಾಗುತ್ತದೆ ಸರಿಯಾಗಿ ಮೂರುಗಂಟೆಗೆ ಗರ್ಭಗುಡಿಯ ಕದ ತೆರೆಯಲ್ಪಟ್ಟು, ಭಕ್ತರಿಗೆ ಭಗವಂತನ ನಿರ್ಮಾಲ್ಯ ದರ್ಶನ ಲಭಿಸುತ್ತದೆ. ವಾದ್ಯ, ತಾಳ, ಗಂಟೆಗಳ ಶಬ್ದದೊಂದಿಗೆ ಭಕ್ತರ ಹರಿನಾಮ ಘೋಷವು ಸಮ್ಮಿಳಿತವಾಗಿ ಮೊಳಗುತ್ತದೆ. ನಿಜವಾದ ವೈಕುಂಠವಿದೆಂಬಂತೆ ಭಾಸವಾಗುತ್ತದೆ ಅಂತರಂಗದ ತಮಸ್ಸೆಲ್ಲ ಹರಿದು, ಆತ್ಮಾನಂದ ಹೊಂಹೊಮ್ಮುತ್ತದೆ ಹೊರವಲಯದಲ್ಲಿ ಧ್ವನಿಮುದ್ರಿತ ಸ್ತೋತ್ರಗಳು ಪ್ರತಿಧ್ವನಿಸುತ್ತವೆ.

ಅನಂತರ ಹಿಂದಿನ ದಿನದ ಆ ಅಲಂಕಾರಗಳನ್ನೆಲ್ಲಾ ತೆಗೆಯುತ್ತಾರೆ. ಆ ಮೇಲೆ ಕ್ರಮವಾಗಿ ಎಣ್ಣೆ ಅಭಿಷೇಕ, 'ವಾಕಚ್ಚಾರ್ತ್' ('ಬಾಗೆ' ಎಂಬ ಮರದ ತೊಗಟೆಯಿಂದ ತಯಾರಿಸಿದ ಸ್ನಾನದ ಹುಡಿಯನ್ನು ದೇವ ವಿಗ್ರಹದ ಮೈಗೆ ಹಾಕುವುದು ) ಶಂಖಾಭಿಷೇಕ, ಕುಂಭಾಭಿಷೇಕ ಮುಂತಾದ ಅಭಿಷೇಕ ವಿಧಿಗಳು ನಡೆಯುವುವು. ಈ ದರ್ಶನಕ್ಕಾಗಿಯೂ ಜನರು ಕಿಕ್ಕಿರಿದು ನಿಂತಿರುತ್ತಾರೆ ಭಕ್ತಿಯ ಆವೇಶದಿಂದ "ಹರೇ ನಾರಾಯಣಾ" ಎಂಬ ನಾಮಘೋಷವನ್ನು ಮಾಡುತ್ತಾರೆ. ಈ ಅಭಿಷೇಕದ ಎಣ್ಣೆ ಹಾಗೂ 'ವಾಕಚ್ಚಾರ್ತ್'ನ ತೀರ್ಥಗಳು ಸಕಲವ್ಯಾಧಿ ಹರವೆಂದು ಪ್ರಸಿದ್ಧವಾಗಿವೆ. ಅಭಿಷೇಕಾನಂತರ ವಿಗ್ರಹವನ್ನು ಮನೋಹರವಾದ ಬಾಲಗೋಪಾಲಕೃಷ್ಣನಂತೆ ಅಲಂಕರಿಸುವರು. ಕಿರೀಟ, ಕುಂಡಲ, ಹಾರ, ಕಿಂಕಿಣಿ, ಅಂದುಗೆ, ತೋಳ್ಬಂದಿ, ಮುಂತಾದ ಆಭರಣಗಳನ್ನು ಧರಿಸಿ, ಹಣೆಗೆ ಗೋಪೀನಾಮ ವಿರಿಸಿ, ನವಸುಮ ಹಾಗೂ ಎಳೆತುಳಸಿಯಿಂದ ರಚಿಸಿದ ವನಮಾಲೆ, ಕೆಂದಾವರೆಯ ಮಾಲೆಗಳನ್ನು ಧರಿಸಿ, ಒಂದು ಕೈಯಲ್ಲಿ ಬೆಣ್ಣೆ ಇನ್ನೊಂದರಲ್ಲಿ ಕೊಳಲನ್ನು ಹಿಡಿದು, ಮುಗುಳು ನಗುತ್ತಾ, ಕರುಣಾಕಟಾಕ್ಷ ಬೀರಿ ನಿಂತಿರುವ ಆ ಸಚ್ಚಿದಾನಂದನ ನೀಲಪ್ರಭೆಯಲ್ಲಿ ಭಕ್ತವೃಂದವು ತನ್ಮಯವಾಗಿ, ಪರಮಾನಂದ ಪುಳಕಿತರಾಗುವರು ನಿಜವಾಗಿಯೂ ಎಷ್ಟೋಜನ್ಮಗಳ ಪುಣ್ಯಫಲದಿಂದ ಈ ದಿವ್ಯದರ್ಶನ ಭಾಗ್ಯವೊದಗುವುದು ಎಂಬ ಸತ್ಯ ಪ್ರತಿಯೊಬ್ಬರಿಗೂ ಅನುಭವವಾಗುವುದು ಅನಂತರ ನೈವೇದ್ಯ, ಉಷಃಪೂಜೆ, ನಡೆಯುವುದು. ಭಕ್ತರದರ್ಶನಕ್ಕಾಗಿ ಭಗವಂತನು ಆಗಮಿಸುವನೋ ಎಂಬಂತೆ, ದೇವರ ಉತ್ಸವಮೂರ್ತಿಯನ್ನು ಹೊರತಂದು, ಅಲಂಕರಿಸಿದ ಆನೆಯ ಮೇಲೆ ಸವಾರಿಮಾಡಿಸುವರು. 'ಶಿವೇಲಿ' ಎಂದು ಕರೆಯಲ್ಪಡುವ ಈ 'ಬಲಿ' ದೇವಾಲಯಕ್ಕೆ ಮೂರು ಪ್ರದಕ್ಷಿಣೆ ಬರುತ್ತದೆ ಭಕ್ತಜನ ಸಮೂಹವು, "ಹರೇರಾಮ ಹರೇರಾಮ, ರಾಮ ರಾಮ ಹರೇ ಹರೇ, ಹರೇಕೃಷ್ಣ ಹರೇಕೃಷ್ಣ, ಕೃಷ್ಣಕೃಷ್ಣ ಹರೇಹರೇ" ಎಂದು ತಾಳ ಬದ್ಧವಾಗಿ ಕೀರ್ತಿಸುತ್ತಾ ತಾವೂ ಜೊತೆಯಲ್ಲಿ ಪ್ರದಕ್ಷಿಣೆ ಹಾಕುವರು ಇದಾದನಂತರ ಕ್ಷೀರಾಭಿಷೇಕ ನಡೆಯುವುದು ಗೋವರ್ಧನಧಾರಿಯಾದ ಕೃಷ್ಣನೊಡನೆ ಸೋತ ದೇವೇಂದ್ರನು, ಸುರಭಿಯ ಹಾಲಿನಿಂದ ನೆರವೇರಿಸಿದ 'ಗೋವಿಂದಾಭಿಷೇಕ'ದ ನೆನಪನ್ನು ಇದು ತರುತ್ತದೆ. ಸಾಧಾರಣ 9 ಗಂಟೆಯ ವೇಳೆಗೆ 'ಪಂದೀರಡಿಪೂಜೆ' ನಡೆಯುತ್ತದೆ ಅನಂತರ ನವಕಾಭಿಷೇಕ, ಮಧ್ಯಾಹ್ನದ ನೈವೇದ್ಯ, ಮಹಾಪೂಜೆ ನಡೆಯುವುದು. ಮೂಲಪ್ರಕೃತಿ ಸಮರ್ಪಣದಿಂದ ಕೂಡಿದ ಮಧ್ಯಾಹ್ನದ ಮಹಾಪೂಜೆಯು ಬಹಳ ವಿಶೇಷವಾದುದು ಈ ಪೂಜಾವಿಧಿಗಳೆಲ್ಲವೂ ಶಂಕರಾಚಾರ್ಯರಿಂದ ಕ್ರಮಗೊಳಿಸಲ್ಪಟ್ಟವುಗಳಾಗಿವೆ ಹೆಚ್ಚು-ಕಡಿಮೆ 12-30 ಅಥವಾ 1 ಗಂಟೆಯ ವೇಳೆಗೆ ಪೂಜೆ ಕಳೆದು, ಗರ್ಭಗುಡಿಯ ಬಾಗಿಲು ಮುಚ್ಚಿದರೆ ಪುನಃ ಸಂಜೆ 4 ಗಂಟೆಗೆ ತೆರೆಯಲ್ಪಡುವುದು 5 ಗಂಟೆಗೆ 'ಶಿವೇಲಿ'. 6 ರಿಂದ 6-30 ರೊಳಗೆ 'ದೀಪಾರಾಧನೆ'. ಈ ವೇಳೆಯಲ್ಲಿ ಜನಸಂದಣಿ ಬಹಳ ಹಗಲು ಮರೆಯಾಗಿ ಕತ್ತಲೆ ಆವರಿಸುವ ಸಂಧ್ಯಾಸಮಯದಲ್ಲಿ ದೇವರ ಮುಂದೆ ದೀಪ ಬೆಳಗಿ ವಂದಿಸುವುದು ಭಾರತದ ಶ್ರೇಷ್ಠ ಸಂಪ್ರದಾಯಗಳಲ್ಲೊಂದು. 'ದೀಪಾರಾಧನೆ'ಯ ವೇಳೆ ದೇವರದರ್ಶನ ಪಾಪಹರ, ಪುಣ್ಯಕರವೆಂದು ಜನರ ದೃಢ ನಂಬುಗೆ ಎಂಬುದು ಇದರಿಂದ ವ್ಯಕ್ತವಾಗುವುದು. ರಾತ್ರಿ 8 ರ ಹೊತ್ತಿಗೆ ಪೂಜೆ, ಅನಂತರ 'ಶಿವೇಲಿ', 'ತ್ರಿಪ್ಪುಗೆ'ಯೆಂಬ ದಿನಾಂತ್ಯದ ಪೂಜಾವಿಧಿ. ಇದು ಸಾಮಾನ್ಯ ದೈನಂದಿನ ಪೂಜಾವಿಧಿಗಳು ಕಾರ್ತಿಕ, ಮಂಡಲ, ವೈಶಾಖ ಮೊದಲಾದ ಪುಣ್ಯಕಾಲಗಳಲ್ಲಿ ವಿಶೇಷ ಪೂಜಾ ವಿಧಿಗಳಿರುತ್ತವೆ. ಆಗಾಗ 'ಉದಯಾಸ್ತಮಾನ ಪೂಜೆ', ಸಂತರ್ಪಣೆ, ಉತ್ಸವ ಮೊದಲಾದುವು 'ಸೇವೆ'ಯಾಗಿ ನಡೆಸಲ್ಪಡುತ್ತವೆ. ವೃಶ್ಚಿಕ, ಏಕಾದಶಿಯು "ಗುರುವಾಯೂರು ಏಕಾದಶಿ" ಎಂದು ಪ್ರಸಿದ್ಧಿಯಾಗಿದೆ ಅತ್ಯಂತ ಜನಸಂದಣಿ ಸೇರುವ ಪುಣ್ಯದಿನವದು. ಕುಂಭಮಾಸದ ಶುಕ್ಲಪಕ್ಷದ ಏಕಾದಶಿ ಮೊದಲ್ಗೊಂಡು 9 ದಿನಗಳ ಉತ್ಸವ ಪ್ರತಿವರ್ಷ ನಡೆಯುವುದು.

ವೈಶಿಷ್ಟ್ಯ :– ಗುರುವಾಯೂರು ಕ್ಷೇತ್ರದ ಮಹಿಮೆ ಉಳಿದವುಗಳಿಗಿಂತ ಬೇರೆ ಕಲಿಕಾಲದ ಧರ್ಮವಾದ ಹರಿನಾಮ ಸಂಕೀರ್ತನೆಯು ಸದಾ ಇಲ್ಲಿ ನಡೆಯುತ್ತಿರುವುದೇ ಈ ಮಹಿಮಾ ವಿಶೇಷದ ತಿರುಳು ಎನ್ನಬಹುದು.

( 36ನೇ ಪುಟ ನೋಡಿ )


## ಪ್ರತ್ಯೇಕ ಕಲ್ಯಾಣೋತ್ಸವ

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

ಆರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿ ಐದು ಜನರಿಗೆ ಮಾತ್ರ ಪ್ರವೇಶ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**

# ಭಾಗವತದ ಮಹಿಮೆ

ಕೃಷ್ಣದ್ವೈಪಾಯನರೆಂದು ಪ್ರಸಿದ್ಧರಾದ ಭಗವಾನ್ ವೇದವ್ಯಾಸರು ವೇದಗಳನ್ನು ವಿಂಗಡಿಸಿ, ವೇದಾಂತಸಾರದಿಂದ ಉಪನಿಷತ್ತುಗಳನ್ನು ಪ್ರಕಾಶಪಡಿಸಿದರು. ಮಹಾಭಾರತವನ್ನೂ, ಅಷ್ಟಾದಶ ಪುರಾಣಗಳನ್ನೂ ರಚಿಸಿದರು. ವೇದೋಪನಿಷತ್ತುಗಳ ಸಾರವನ್ನು ಅತ್ಯಲ್ಪಕಾಲದಲ್ಲಿ ತಿಳಿಯಲು ಸಹಾಯವಾಗುವಂತೆ ಬ್ರಹ್ಮಸೂತ್ರಗಳನ್ನು ಪ್ರಕಟಿಸಿದರು. ಈ ಸೂತ್ರಗಳ ಸಹಾಯದಿಂದ ಮಾನವರು ತಮ್ಮ ನಿರ್ದಿಷ್ಟ ಜೀವಿತ ಕಾಲದಲ್ಲಿ ಬ್ರಹ್ಮಜ್ಞಾನ ಪಡೆದು ಮೋಕ್ಷ ಪಡೆಯಬಹುದೆಂದು ವ್ಯಾಸದೇವರು ನಿರೀಕ್ಷಿಸಿದರು. ಆದರೆ ಸೂತ್ರಗಳಿಗೆ ಬೇರೆಬೇರೆ ಭಾಷ್ಯಸೃಷ್ಟಿಯಾಗಿ, ಹೊಸ ಸಮಸ್ಯೆಗಳು ಹುಟ್ಟಿಕೊಳ್ಳುವುದೆಂದು ಭಾವಿಸಿ ತಮ್ಮ ಕಾರ್ಯ ಸಫಲವಾಗಲಿಲ್ಲವೆಂದು ತಿಳಿದು, ಧರ್ಮಶಾಸ್ತ್ರ, ವೇದಾಂತ, ವೇದಸಂಸ್ಕೃತಿ ಇತ್ಯಾದಿ ವಿಷಯಗಳನ್ನು ಅಳವಡಿಸಿ ಮಹಾಭಾರತವೆಂಬ ಮಹಾಗ್ರಂಥವನ್ನು ರಚಿಸಿದರು ಆದರೂ ಮಹರ್ಷಿಗೆ ಮನಸ್ಸಮಾಧಾನ ಉಂಟಾಗದೆ, ತೃಪ್ತಿಹೊಂದದೆ ಏನೋ ಒಂದು ಬಗೆಯ ಅಶಾಂತಿ ಹುಟ್ಟಿತು.

ಸರಸ್ವತೀನದೀತೀರದ ಬದರಿಕಾಶ್ರಮದಲ್ಲಿ ವೇದವ್ಯಾಸರು ಆಲೋಚನೆಮಾಡುತ್ತ ಕುಳಿತಿರುವಾಗ, ಮಹರ್ಷಿ ನಾರದ ಅಲ್ಲಿಗೆ ಬಂದನು. ದೇವರ್ಷಿ ನಾರದನಿಗೆ, ವ್ಯಾಸದೇವರು ಅರ್ಘ್ಯಪಾದ್ಯ ಆಚಮನೀಯಗಳನ್ನು ಅರ್ಪಿಸಿ ಸತ್ಕರಿಸಿದರು. ಕುಶಲ ಸಂಭಾಷಣೆಗಳಾದನಂತರ ನಾರದನು, ವೇದವ್ಯಾಸರನ್ನು ಕುರಿತು ಹೀಗೆ ಕೇಳುವನು. "ಹೇ! ಪರಾಶರ ಕುಮಾರಾ! ನಿಮ್ಮ ಶಾರೀರಕ, ಮಾನಸಿಕ ಸಂಸ್ಥಿತಿ ಚೆನ್ನಾಗಿರುವುದೇ? ಧಾರ್ಮಿಕ ಬಯಕೆಗಳೆಲ್ಲಾ ಪರಿಪೂರ್ಣವಾದುವೇ? ನಿಮ್ಮ ಅದ್ಭುತ ರಚನೆಯಾದ ಮಹಾಭಾರತವು ನಿಮ್ಮ ಮನಸ್ಸಿಗೆ ಸಮಾಧಾನ ತಂದಿತೇ? ಏಕೋ ಖಿನ್ನರಾಗಿರುವಂತಿದೆ. ಕಾರಣವೇನು? ಎಂದು ಕೇಳಿದನು.

"ಹೇ ಮಹಾತ್ಮ! ಗುರುದೇವಾ!! ಇಲ್ಲಿಯವರೆಗೆ ನೀವು ಸರ್ವಜ್ಞರು. ತ್ರಿಲೋಕ ಸಂಚಾರಿಗಳು. ನಿಮಗೆ ತಿಳಿಯದುದು ಏನೂ ಇಲ್ಲ. ನನ್ನ ಅಶಾಂತಿಗೆ ಕಾರಣ ನಾನೇ ತಿಳಿಯದವನಾದ್ದೇನೆ. ಎಲ್ಲವನ್ನು ತಿಳಿದ ನೀವೇ ಇದನ್ನು ತಿಳಿಸಬೇಕು" ಎಂದು ವೇದವ್ಯಾಸರು ಉತ್ತರವಿತ್ತರು.

ಅನಂತರ ನಾರದಮಹರ್ಷಿಯು ವೇದವ್ಯಾಸರನ್ನು ಕುರಿತು 'ವ್ಯಾಸರೇ! ನೀವು ವೇದ ವೇದಾಂಗ, ಇತಿಹಾಸಾದಿಗಳನ್ನು ರಚಿಸಿದಿರಿ ಮಾನವ ಜನಾಂಗಕ್ಕೆ ಮಹೋಪಕಾರ ಮಾಡಿರುವಿರಿ ಪರಮಾತ್ಮನ ವಿಷಯವಾಗಿ ಇಷ್ಟುವಿಪುಲ ಸಾಹಿತ್ಯ ಸೃಷ್ಟಿ ಮಾಡಿದರೂ, ಪರಮಾತ್ಮರೂಪೀ ಶ್ರೀಕೃಷ್ಣನ ಲೀಲಾವಿಷಯಕವಾದ ಅವನ ನಿರ್ದಿಷ್ಟ ಚಿತ್ತವನ್ನು ಈ ಸಾಹಿತ್ಯದಲ್ಲಿ ನೀವು ವಿವರಿಸದೆ ಇರುವುದೇ ಈ ಅಶಾಂತಿಗೆ ಕಾರಣವಿರಬಹುದು. ಪ್ರಾಯಶಃ ಪರಮಾತ್ಮನೂ ಇದರಿಂದ ಪ್ರೀತನಾಗದೇ ಇರಬಹುದು. ಹೇ! ವ್ಯಾಸದೇವಾ! ಇದುವರೆವಿಗೆ ನೀವು ಸೃಷ್ಟಿಸಿರುವ ಪವಿತ್ರ ಸಾಹಿತ್ಯರಾಶಿಯಲ್ಲಿ ವೇದ, ವೇದಾಂಗ, ಧರ್ಮ, ಅರ್ಥ, ಕಾಮ ಸಂಬಂಧವಿಷಯಗಳ ಪ್ರಕಾಶನವೇ ಹೆಚ್ಚು. ಆದರೆ ಪರಮಾತ್ಮನು ಲೀಲಾಮಾನುಷ ವಿಗ್ರಹನು, ಅವನ ಬಾಲ್ಯಲೀಲೆಗಳನ್ನೊಳಗೊಂಡ ಇನ್ನೊಂದು ಗ್ರಂಥವನ್ನು ನೀವು ರಚಿಸಿದರೆ, ನಿಮಗೆ ಶಾಂತಿ ದೊರೆತು, ಭಕ್ತಸಮಾಧಿ ಸಾಧಿಸಿದಂತಾಗುವುದು' ಎಂದು ತಿಳಿಸಿ ನಾರದನು ಹೊರಟುಹೋದನು

**ಶ್ರೀ ಡಿ. ಕೃಷ್ಣೈಯಂಗಾರ್, ಎಂ.ಎ**

ವೇದವ್ಯಾಸರು ಹಾಗೆಯೇ ಯೋಚನೆ ಮಾಡುತ್ತ ಪರಮಾತ್ಮನು ತನ್ನ ಲೀಲಾವಿನೋದಕ್ಕಾಗಿ ಮತ್ತು ದುಷ್ಟಶಿಕ್ಷಣ ಶಿಷ್ಟರಕ್ಷಣೆಗಾಗಿ ಅವತಾರ ಮಾಡಿದ ಶ್ರೀಕೃಷ್ಣ ಚರಿತ್ರೆಯನ್ನು ನೆನಪಿಗೆ ತಂದುಕೊಂಡರು. ಇದರ ಫಲವಾಗಿ ಸರ್ವವಿಧ ಪಾಪಪರಿಹಾರಕ್ಕೆ ಪರಮ ಔಷಧಿಯಂತಿರುವ ಭಕ್ತಿಪ್ರಧಾನವಾದ ಮತ್ತೊಂದು ಮಹಾಗ್ರಂಥವನ್ನು ರಚಿಸಿದರು. ಇದೇ ಶ್ರೀಮದ್ಭಾಗವತ. ಭಾಗವತವು ಪರಮಾತ್ಮಸ್ವರೂಪಿಯಾದ ಶ್ರೀಕೃಷ್ಣನ ಚರಿತ್ರೆ. ಇದು ಸರ್ವೋತ್ತಮ ರೀತಿಯದಾಗಿದೆ. ಸರ್ವಾದರಣೀಯವಾಗಿದೆ.

ಅಷ್ಟಾದಶ ಪುರಾಣಗಳಲ್ಲಿ ಶ್ರೀಮದ್ಭಾಗವತ ಪುರಾಣವು ಕಿರೀಟ ಪ್ರಾಯವಾಗಿದೆ. ಇಂತಹ ಪವಿತ್ರ ಕಾವ್ಯ ಇನ್ಯಾವ ದೇಶದಲ್ಲಿಯೂ ಇಲ್ಲ. ಮಹಾಭಾರತ, ವಿಷ್ಣುಪುರಾಣ, ಹರಿವಂಶ,



ಮತ್ತು ಇತರ ಕೆಲವು ಪುರಾಣಗಳಲ್ಲಿ ಶ್ರೀಕೃಷ್ಣ ವೃತ್ತಾಂತವನ್ನು ವೇದವ್ಯಾಸರು ನೇರಿಸಿದ್ದಾರೆ, ಆದರೆ, ಮಹಾಭಾರತ ಮತ್ತು ಹರಿವಂಶಗಳಲ್ಲಿ ಇಲ್ಲದ ವಿಷಯಗಳನ್ನು ತಿಳಿಸುವುದಕ್ಕೆ ಶ್ರೀಮದ್ಭಾಗವತವು ರಚಿಸಲ್ಪಟ್ಟಿತು. ಒಂದು ರೀತಿಯಲ್ಲಿ ಭಾಗವತವು ಶ್ರೀಕೃಷ್ಣ ಪರಮಾತ್ಮನ ಸಂಪೂರ್ಣ ಚರಿತ್ರೆ ಎಂದು ಹೇಳಬಹುದು. ಈ ಎಲ್ಲ ಗ್ರಂಥಗಳಿಗಿಂತ, ಶ್ರೀಮದ್ಭಾಗವತಕ್ಕೆ ವಿಶೇಷ ರೀತಿಯ ಮಹಿಮೆ ಇದೆ. ಪರಮಾತ್ಮನ ಉಕ್ತಿಯಿಂದಲೇ, ಈ ಮಹಾಗ್ರಂಥದ ಮಹಿಮೆ ಹೀಗೆ ವರ್ಣಿತವಾಗಿದೆ-

ಶ್ರೀಮದ್ಭಾಗವತಂ ನಾಮ ಪುರಾಣಂ
ಲೋಕ ವಿಶ್ರುತಂ ।
ಶೃಣುಯಾಚ್ಛ್ರದ್ಧಯಾಯುಕ್ತೋ ಮಮ
ಸಂತೋಷ ಕಾರಣಂ ॥

ಮೋಕ್ಷಪ್ರಾಪ್ತಿಗೆ ಭಾಗವತ ಕಥೆಯನ್ನು ಕೇಳುವುದು ಬಹು ಮುಖ್ಯ. ಸಾವಿರಾರು ಅಶ್ವಮೇಧ ಯಾಗ ನಡೆಸಿದರೂ, ನೂರಾರು ರಾಜಸೂಯಾಗ ನಡೆಸಿದರೂ, ಭಾಗವತ ಕಥಾಶ್ರವಣಕ್ಕೆ ಸರಿಯಾಗಲಾರದು. ಗಂಗೆ, ಕಾಶಿ, ಪುಷ್ಕರ, ಪ್ರಯಾಗ–ಮುಂತಾದ ತೀರ್ಥ ಕ್ಷೇತ್ರಗಳಲ್ಲಿ ಸುತ್ತಿ ಬಂದರೂ, ಈ ಕಥಾಶ್ರವಣದಿಂದ ಉಂಟಾಗುವ ಫಲಕ್ಕೆ ಸಮಾನವಾಗಲಾರದು. ವೇದಗಳಾಗಲಿ, ಪುರುಷಸೂಕ್ತವಾಗಲಿ, ಮೂಲ, ಅಷ್ಟಾಕ್ಷರ ದ್ವಾದಶಾಕ್ಷರಾದಿ ಮಂತ್ರದ ಉಚ್ಚಾರಣೆಯಾಗಲಿ ಭಾಗವತ ಕಥೆಗೆ ಬೇರೆಯಾದುದಲ್ಲ. ಅನೇಕ ಜನ್ಮದಿಂದ ಸಂಚಿತವಾದ ಪಾಪಗಳೆಲ್ಲ ಭಾಗವತ ಕಥಾಶ್ರವಣದಿಂದ ಪರಿಹಾರವಾಗುವುದು. ಅಂತ್ಯ

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

### ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | " | 40-00 |
| 3. | ಪುಳಿಯೋಗರೆ | " | 50-00 |
| 4. | ಪೊಂಗಲು | " | 55-00 |
| 5. | ಸಕ್ಕರೆಪೊಂಗಲ್ | " | 65-00 |
| 6. | ಶಾಕರ ಭಾತ್ | " | 85-00 |
| 7. | ಕೇಸರೀ ಭಾತ್ | " | 90-00 |
| 8. | ಸೀರ | " | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಕಾಲದಲ್ಲಿ ಭಾಗವತ ಕಥೆಯನ್ನು ಕೇಳುವುದರಿಂದ ಶ್ರೀಮನ್ನಾರಾಯಣನು ತಾನಾಗಿ ಮುಕ್ತಿ ಕೊಡುವನು. ಹೀಗೆ ಭಾಗವತವನ್ನು ಓದಿ, ಓದಿಸಿಕೊಳ್ಳತಕ್ಕ ಭಾಗ್ಯವೂ ಕೂಡ ಪೂರ್ವಾರ್ಜಿತ ಪುಣ್ಯದಿಂದಲೇ ಲಭಿಸುವುದು.

ಕಲಿಕಾಲವು ಕೇವಲ ದೋಷ ಪ್ರಚುರವಾದುದು. ಈ ಕಾಲದಲ್ಲಿ ಮನಸ್ಸನ್ನು ಹತೋಟಿಯಲ್ಲಿಡುವುದು ಬಹಳ ಕಷ್ಟ, ಮಾನವನ ಆಯುಃ ಪ್ರಮಾಣವು ಅಲ್ಪ. ಧ್ಯಾನ, ತಪಸ್ಸು, ಯೋಗಾಭ್ಯಾಸ, ಯಜ್ಞಾದಿಗಳಿಂದ ಸಾಧಿಸಬಹುದಾದ ಕಷ್ಟತರ ಫಲಗಳನ್ನು, ಭಾಗವತ ಕಥಾಶ್ರವಣದಿಂದ ಸುಲಭವಾಗಿ ಪಡೆಯಬಹುದು

ಇಂತಹ ಮಹಿಮೆ ಭಾಗವತಕ್ಕೆ ಬರುವುದಕ್ಕೆ ಇರುವ ಮುಖ್ಯವಾದ ಕಾರಣವನ್ನು ಸೂತನು ಹೀಗೆ ತಿಳಿಸುವನು. "ಹೇ ಶೌನಕಾ! ಹಿಂದೆ ಶ್ರೀಕೃಷ್ಣನು ತನ್ನ ಅವತಾರ ಸಮಾಪ್ತಿಯ ಕಾಲದಲ್ಲಿ, ವೈಕುಂಠಕ್ಕೆ ತೆರಳಲು ಸಿದ್ಧನಾದಾಗ ಪರಮಭಕ್ತನಾದ ಉದ್ಧವನು ಶ್ರೀಕೃಷ್ಣನನ್ನು ಕುರಿತು ಹೀಗೆ ಪ್ರಾರ್ಥಿಸುವನು 'ಹೇ! ಪರಮಾತ್ಮ! ಈಗ ಲೋಕದಲ್ಲಿ ಕಲಿಯ ಪ್ರಾಬಲ್ಯ ಹೆಚ್ಚುತ್ತಿರುವುದು ಜನರು ದುಷ್ಟರಾಗುತ್ತಿದ್ದಾರೆ. ದುಷ್ಟರ ಸಹವಾಸದಿಂದ ಸತ್ಪುರುಷರು ಕೆಡುತ್ತಿದ್ದಾರೆ. ಭೂಮಂಡಲದಲ್ಲಿ ಗುಣವು ಕುಗ್ಗುತ್ತಿದೆ. ಭೂಮಿಗೆ ರಕ್ಷಕರಾರು? ಇನ್ನುಮೇಲೆ ಗೋರೂಪಿಯಾದ ಭೂದೇವಿಯು ಇನ್ನು ಯಾರನ್ನು ಆಶ್ರಯಿಸಬೇಕು, ನಿನ್ನನ್ನು ಬಿಟ್ಟರೆ? ಇವಳನ್ನು ಇನ್ನು ಯಾರು ತಾನೆ ರಕ್ಷಿಸುವವರಿದ್ದಾರೆ. ಭಕ್ತವತ್ಸಲನಾದ ನೀನು ಶಿಷ್ಟರಕ್ಷಣಕ್ಕಾಗಿ ಇಲ್ಲಿಯೇ ಇರಬೇಕು. ಅಪ್ರಾಕೃತನಾದರೂ, ಭಕ್ತರ ಉದ್ಧಾರಕ್ಕಾಗಿ ಪ್ರಾಕೃತ ರೂಪಹೊಂದಿ ಬಂದೆಯಲ್ಲವೇ? ನೀನು ಈ ಲೋಕ ಬಿಟ್ಟರೆ, ಭಕ್ತರ ಗತಿಯೇನು? ನೀನು ಇಲ್ಲಿಯೇ ನಿಲ್ಲಬಾರದೇ?" ಎಂದು ಪ್ರಾರ್ಥಿಸಿದನು

ಆಗ ಶ್ರೀಕೃಷ್ಣನು ಭಕ್ತರ ಉದ್ಧಾರವಮಾರ್ಗವನ್ನು ಯೋಚಿಸುತ್ತ, ತನ್ನ ಚರಿತ್ರರೂಪವಾದ ಭಾಗವತವನ್ನು ತನ್ನ ಪ್ರತಿನಿಧಿಯನ್ನಾಗಿ ಮಾಡಿ, ತನ್ನ ತೇಜಸ್ಸನ್ನು ಅದರಲ್ಲಿ ನೆಲೆಗೊಳಿಸಿದನು. ಹೀಗೆ ಭಾಗವತ ಕಥೆಯು ಸಾಕ್ಷಾತ್ಪರಮಾತ್ಮನ ವಾಙ್ಮಯ ಶರೀರದಂತೆ ಈ ಲೋಕದಲ್ಲಿ ಬೆಳಗುವುದು, ಭಾಗವತಸಪ್ತಾಹಶ್ರವಣವೆಂಬುದು ಎಲ್ಲಕ್ಕಿಂತ ಉತ್ತಮವಾದುದು. ಇದು ಎಲ್ಲ ಧರ್ಮಕ್ಕೂ ಪ್ರತಿನಿಧಿಯಾಗಿರುವುದು. ದುಃಖ ದಾರಿದ್ರ್ಯ ಕಷ್ಟಗಳನ್ನು ಇದು ನೀಗಿಸುವುದು. ಇದರಿಂದ ಕಾಮಕ್ರೋಧಾದಿಗಳನ್ನು ಜಯಿಸಬಹುದು. ಪಾಪನಿವಾರಣೆಯಾಗುವುದು, ಕಲಿಕಾಲದಲ್ಲಿ ಭಾಗವತ ಕಥಾಸಪ್ತಾಹ ಶ್ರವಣವೊಂದೇ ಎಲ್ಲ ಕಷ್ಟಪರಿಹಾರಕ್ಕೆ ಮುಖ್ಯ ಸಾಧನವಾಗಿದೆ.

ಇದಕ್ಕೊಂದು ಉದಾಹರಣೆಯನ್ನು ಭಾಗವತದಲ್ಲಿಯೇ ನಿರೂಪಿಸಲಾಗಿದೆ. ಆತ್ಮದೇವನೆಂಬುವನು ವೇದಾಧ್ಯಯನಸಂಪನ್ನನಾಗಿ, ತನ್ನ ಪತ್ನಿ ದುಂಧುಲಿಯೊಡನೆ ಬಹುಕಾಲ ಸುಖವಾಗಿದ್ದನು. ಅವರಿಗೆ ಮಕ್ಕಳಾಗಲಿಲ್ಲ. ಆತ್ಮದೇವನು, ಮಕ್ಕಳಿಲ್ಲದ ಸಂಕಟದಿಂದ ಪರಿತಪಿಸಿ, ಕಾಡಿಗೆ ಹೋಗಿ, ಅಲ್ಲಿ ಒಬ್ಬ ಸಂನ್ಯಾಸಿಯನ್ನು ಕಂಡು ತನ್ನ ಕಷ್ಟವನ್ನು ನಿವೇದಿಸಿ, ಮಕ್ಕಳಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಮಕ್ಕಳಿರುವವರ ಕಷ್ಟವನ್ನು ಸನ್ಯಾಸಿಯು ತಿಳಿಸಿದರೂ ಕೇಳದೆ, ತನಗೆ ಮಗನಾಗಬೇಕೆಂದೇ ಹಟಹಿಡಿದು, ಸನ್ಯಾಸಿಯನ್ನು ಪ್ರಾರ್ಥಿಸಿ, ಅವನಿಂದ ಒಂದು ಹಣ್ಣನ್ನು ಪಡೆದು ತನ್ನ ಹೆಂಡತಿ ದುಂಧುಲಿಗೆ ಕೊಟ್ಟನು. ಅದನ್ನು ಅವಳು ತಿಂದರೆ ಗರ್ಭವತಿಯಾಗಿ ಪುತ್ರನನ್ನು ಪಡೆಯಬಹುದೆಂಬ ಸನ್ಯಾಸಿಯ ಆಶೀರ್ವಚನವನ್ನು ಪತ್ನಿಗೆ ಆತ್ಮದೇವನು ತಿಳಿಸಿದನು.

ಗರ್ಭದಿಂದ ಉಂಟಾಗಬಹುದಾದ ಕಷ್ಟಗಳನ್ನು ಹಟಮಾರಿಯಾದ ದುಂಧುಲಿಯು ಊಹಿಸಿ, ಆ ಹಣ್ಣನ್ನು ತಾನು ತಿನ್ನದೆ, ತಮ್ಮ ಹಸುವಿಗೆ ತಿನ್ನಿಸಿದಳು. ತಾನು ತಿಂದುದಾಗಿ, ಪತಿಗೆ ಸುಳ್ಳು ಹೇಳಿದಳು ತನ್ನ ತಂಗಿ ಗರ್ಭವತಿಯಾಗಿದ್ದುದರಿಂದ, ತಾನೂ ಗರ್ಭವತಿಯೆಂದು ನಟಿಸಿ, ತನ್ನ ತಂಗಿಯ ಮಗುವನ್ನೇ ತನ್ನ ಮಗುವೆಂದು ಪತಿಗೆ ತಿಳಿಸಿ, ತಂಗಿಯ ಮಗು ಸತ್ತುಹೋಯಿತೆಂದು ಸುಳ್ಳು ಹೇಳಿ, ತಂಗಿಯನ್ನು ಮಗುವಿನ ಪೋಷಣೆಗಾಗಿ ಮನೆಯಲ್ಲಿಯೇ ಇಟ್ಟುಕೊಂಡಳು. ಮಗುವಿಗೆ ದುಂಧುಕಾರಿ ಎಂದು ನಾಮಕರಣ ಮಾಡಿ ಬೆಳಸಲಾಗುತ್ತಿತ್ತು.

ಇತ್ತ ಹಣ್ಣನ್ನು ತಿಂದ, ಗೋವೂ ಕೂಡ ಗರ್ಭಧಾರಣೆಮಾಡಿ, ಸಕಾಲದಲ್ಲಿ ಒಂದು ಗಂಡು ಮಗುವನ್ನು ಪ್ರಸವಿಸಿತು. ಮಗುವಿಗೆ ಉದ್ದವಾದ ಕಿವಿಗಳಿದ್ದುದರಿಂದ ಆತ್ಮದೇವನು, ಈ ಮಗುವಿಗೆ ಗೋಕರಣವೆಂದು ನಾಮಕರಣ ಮಾಡಿ ಈ ಎರಡು ಮಕ್ಕಳನ್ನೂ ಪ್ರೀತಿಯಿಂದ ಸಲಹುತ್ತಿದ್ದನು.

ಕಾಲಕ್ರಮದಲ್ಲಿ ಮುಂಧುಕಾರಿಯು ದುಷ್ಟನಾಗುತ್ತ, ತಂದೆಯ ಮಾತನ್ನು ಕೇಳದೆ ಅವಿಧೇಯವಾಗಿ, ಕ್ರೂರಿಯೂ, ಕಳ್ಳನೂ, ಹಟಮಾರಿಯೂ ಆದನು. ಇದನ್ನು ಸಹಿಸಲಾರದ ತಂದೆಯು ಕಾಲವಾದನು. ಅನಂತರ ದುಂಧುಕಾರಿಯು,

( 35ನೇ ಪುಟ ನೋಡಿ )

# ಜಗನ್ನಾಥ ಪಂಡಿತರಾಜ

**ಎಂ. ವಿ. ಸಂಪತ್ಕುಮಾರಾಚಾರ್**

ಸಂಸ್ಕೃತಸಾಹಿತ್ಯಾಕಾಶದಲ್ಲಿ ಉಭಯ ಪಕ್ಷಗಳಲ್ಲೂ ತಮ್ಮ ಸ್ವಂತಪ್ರಭೆಯಿಂದಲೇ ಪ್ರಕಾಶಿಸುವ ನಕ್ಷತ್ರಗಳು ಅಸಂಖ್ಯಾತ. ಅವುಗಳಲ್ಲಿ ಕೆಲವು ನಕ್ಷತ್ರಗಳು ನಿರಂತರವೂ ಪ್ರಕಾಶಿಸುವಂತಹ ಸಾಮರ್ಥ್ಯವನ್ನು ಪಡೆದಿವೆ. ಆ ನಕ್ಷತ್ರಮಂಡಲದಲ್ಲಿ ಸೂರ್ಯ–ಚಂದ್ರ, ಮತ್ತು ಇತರ ಗ್ರಹಗಳಿಗೆ ಕೆಲವು ಮಹಾಕವಿಗಳನ್ನು ಹೋಲಿಸಬಹುದು. ಭಾಸ, ಕಾಳಿದಾಸ, ಬಾಣಭಟ್ಟ, ಭವಭೂತಿ ದಂಡಿ ಮೊದಲಾದ ಕವಿವರೇಣ್ಯರು, ಮಹಾಕವಿಗಳೆಂದು ಪ್ರಖ್ಯಾತರಾಗಿ ತಮ್ಮ ಅಮೋಘವಾದ ಗ್ರಂಥರತ್ನಗಳಿಂದ ಸರ್ವಕಾಲದಲ್ಲೂ, ಪ್ರಪಂಚದ ನಾನಾಭಾಗಗಳಲ್ಲೂ ವಿಶೇಷ ವಿಖ್ಯಾತರಾಗಿರುತ್ತಾರೆ. ಅದರಂತೆಯೇ "ಜಗನ್ನಾಥಪಂಡಿತ"ನು ತನ್ನ ಪ್ರಾಥಿಮೆಯಿಂದ ಅತಿ ವಿಖ್ಯಾತನಾಗಿ ವಿಜೃಂಭಿಸುತ್ತಾನೆ. ಇವನನ್ನು ಪಂಡಿತೋತ್ತಮರು ಜಗನ್ನಾಥಪಂಡಿತ' ಅಥವಾ 'ಜಗನ್ನಾಥಪಂಡಿತರಾಜ' ನೆಂದೇ ಸಂಬೋಧಿಸುವುದರಿಂದ ಅತನ ವಿದ್ಯಾಪ್ರಾಥಿಮೆ, ಮತ್ತು ಸಕಲ ಶಾಸ್ತ್ರ ನೈಪುಣ್ಯ ಚೆನ್ನಾಗಿ ವ್ಯಕ್ತವಾಗುತ್ತವೆ.

ಈತನು ಆಂಧ್ರಪ್ರದೇಶದವನೆಂದೂ, ಮೇರುಭಟ್ಟ ಮತ್ತು ಲಕ್ಷ್ಮಿ ಇವನ ಜನನೀ ಜನಕರೆಂದೂ ತಂದೆಯ ಹತ್ತಿರದಲ್ಲಿಯೇ ಇವನು ಶಾಸ್ತ್ರಾಭ್ಯಾಸವನ್ನು ಮಾಡಿದನೆಂದೂ ಈ ವಾಕ್ಯಗಳಿಂದ ತಿಳಿದು ಬರುತ್ತದೆ. " ಆಸೀತ್ತೈಲಂಗಾಭಿಜನೋ ವೇಗಿ ನಾಡ ಕುಲೋತ್ಪನ್ನಃ ಮೇರು ಭಟ್ಟಾಖ್ಯೋ ಮಹೀಸುರಸತ್ತಮಃ ಯೋ ವಾರಾಣಸ್ಯಾಂ ಜ್ಞಾನೇಂದ್ರಭಿಕ್ಷೋಃ ವೇದಾಂತ ಶಾಸ್ತ್ರಂ, ಮಹೇಂದ್ರ ಪಂಡಿತಾನ್ನ್ಯಾಯ ವೈಶೇಷಿಕದರ್ಶನೇ, ಖಂಡದೇವಾತ್ಪೂರ್ವ ಮಿಮಾಂಸಾಂ ಶೇಷೋವಾಹ್ವ ವೀರೇಶ್ವರ ಪಂಡಿತಾಚ್ಚ ಮಹಾಭಾಷ್ಯ ಮಧೀತವಾರ್ತಸ್ಮಾಲ್ಲಕ್ಷ್ಮೀನಾಮಿಕಾಯಾಂ ತದ್ಧರ್ಮ ಪತ್ನ್ಯಾಂ ಜಗನ್ನಾಥೋ ಜನ್ಮ ಲೇಭೇ ಪಠಿತವಾಂಶ್ಚ ನಿಖಿಲಾನಿ ಶಾಸ್ತ್ರಾಣಿ ಪ್ರಾಯಃ ಸ್ವಪಿತುರೇವ"

ವಿದ್ಯಾಭ್ಯಾಸವನ್ನು ಮುಗಿಸಿ ದೇಶಸಂಚಾರ ಮಾಡುವ ಸಮಯದಲ್ಲಿ ಈತನು ಶಹಜಹಾನ್ ಚಕ್ರವರ್ತಿಯ ಆಸ್ಥಾನದಲ್ಲಿ ಆಸ್ಥಾನ ಕವಿಯಾಗಿದ್ದು ಆತನ ಮಗಳಾದ ಲವಂಗಿ'ಗೆ ವಿದ್ಯಾಗುರುವಾಗಿಯೂ ಇದ್ದನು. ವಿದ್ಯಾಭ್ಯಾಸಮಾಡಿಸುವ ಕಾಲದಲ್ಲಿ ಅವರಲ್ಲಿ ಪರಸ್ಪರ ಪ್ರೇಮವು ಅಂಕುರಿಸಿ, ಗುರುಶಿಷ್ಯರೇ ಕಾಲಕ್ರಮದಲ್ಲಿ ದಂಪತಿಗಳಾದರೆಂದು ತಿಳಿದು ಬರುತ್ತದೆ. ಈ ವಿಧವಾದ ಅಂತರ್ಜಾತೀಯ ವಿವಾಹವು ಆಕಾಲದಲ್ಲಿ ನಿಷಿದ್ಧವಾಗಿದ್ದರೂ ಸಮಾಜವನ್ನಾಗಲೀ ಜನರ ಬಿರುನುಡಿಗಳನ್ನಾಗಲೀ ಲಕ್ಷ್ಯಮಾಡದೆ ಯವನಕನ್ನಿಕೆಯನ್ನು ಇವನು ಧೈರ್ಯದಿಂದ ವಿವಾಹವಾದನು. ಇದರಿಂದ ಇವನ ಧೈರ್ಯ ಮನೋಭಾವವು ವ್ಯಕ್ತವಾಗುತ್ತದೆ. ಸ್ವಯಂಚಕ್ರವರ್ತಿಯೇ ಇವನ ಪಾಂಡಿತ್ಯ ಧೈರ್ಯ ಮನೋಭಾವಗಳಿಗೆ ಪರವಶನಾಗಿ, ಸುಪ್ರೀತನಾಗಿ ತನ್ನ ಮಗಳನ್ನು ಇವನಿಗೆ ಕೊಟ್ಟನೆಂದು ತಿಳಿದು ಬರುತ್ತದೆ.

ನಯಾಚೇ ಗಜಾಳಿಂ ನವಾ ವಾಜಿರಾಜಿಂ
ನವಿತ್ತೇಷು ಚಿತ್ತಂ ಮದೀಯಂ ಕದಾಪಿ
ಇಯಂ ಸುಸ್ತನೀ ಮಸ್ತಕನ್ಯಸ್ತಹಸ್ತಾ
ಲವಂಗೀ ಕುರಂಗೀ ದೃಗಂಗೀಕರೋತು "

'ನೀನು ಯಾವ ಅಷ್ಟೈಶ್ವರ್ಯವನ್ನು ಕೊಟ್ಟರೂ ಅದು ನನಗೆ ಬೇಕಾಗಿಲ್ಲ ಲವಂಗಿಯನ್ನು ಕೊಟ್ಟರೆ ಸಾಕೆ'ಂದು, ಚಕ್ರವರ್ತಿಯನ್ನು ಕೇಳಿದನಂತೆ.

ಇವನು ಕೇವಲ ಕವಿ, ಪಂಡಿತನಷ್ಟೇ ಅಲ್ಲದೆ ಉದ್ದಾಮ ಲಾಕ್ಷಣಿಕನೂ ಹೌದು. ತನ್ನ ವಿದ್ಯಾಮದದಿಂದ ಯಾರನ್ನೂ ಲಕ್ಷ್ಯ ಮಾಡದೆ, ಅಪ್ಪಯ್ಯ ದೀಕ್ಷಿತರಂತಹ ಮಹಾ ಶ್ರೋತ್ರಿಯರನ್ನೂ ಲಕ್ಷ್ಯಮಾಡದೆ 'ದ್ರವಿಡ ಶಿಶುಃ ಏವಂ ಪ್ರಲಪತಿ ಏವಂ ಜಲ್ಪತಿ'ಮೊದಲಾಗಿ ಹೀಯಾಳಿಸಿರುತ್ತಾನೆ. ಇವರಿಬ್ಬರಿಗೂ ವೈಮನಸ್ಯಕ್ಕೆ ಕಾರಣವು ಇದೇ ಇರಬಹುದು. ಅಪ್ಪಯ್ಯ ದೀಕ್ಷಿತರು ಆ ಕಾಲದ ಅತಿಶ್ರೇಷ್ಠ ವಿದ್ವಾಂಸರೂ, ವೇದಾಂತಿಗಳೂ, ಆಚಾರಶೀಲರೂ ಆಗಿದ್ದು ಇವನು ಯವನ ಕನ್ಯೆಯನ್ನು ವಿವಾಹವಾಗಿರುವುದನ್ನು ಪ್ರಾಯಶಃ ಖಂಡಿಸಿರಬಹುದು. ಇದರಿಂದ ಇವನು ಕುಪಿತನಾಗಿ ಇಬ್ಬರಲ್ಲೂ ವೈಮನಸ್ಯವು ಬೆಳೆದಿರಬಹುದು ಎಂದು ಕಾಣುತ್ತದೆ. ಇವನು ಯವನಿಯೊಡನೆ ಇದ್ದುದನ್ನು ಒಮ್ಮೆ ನೋಡಿದ ಅಪ್ಪಯ್ಯದೀಕ್ಷಿತರು ಇವನನ್ನು ಹೀಗೆ ಪ್ರಶ್ನಿಸಿದರಂತೆ.

"ಕಿಂ ನಿಶ್ಯಂಕಂ ಶೇಷೇ ಶೇಷೇವಯಸಃ
ಸಮಾಗತೋ ಮೃತ್ಯುಃ ।
ಅಥವಾ ಸುಖಂ ಶಯೀಥಾಃ ನಿಕಟೇ
ಜಾಗರ್ತಿ ಜಾಹ್ನವೀ ಜನನೀ॥"

ಮುಂದೆ ಸೂಚಿತವಾದ ಗ್ರಂಥಗಳು ಇವನಿಂದ ರಚಿತವಾದವೆಂದು ಪ್ರಸಿದ್ಧವಾಗಿವೆ. 'ರಸಗಂಗಾಧರ' 'ಯಮುನಾವರ್ಣನ ಚಂಪೂ' 'ಅಸಫವಿಲಾಸ' 'ಚಿತ್ರಮಿಮಾಂಸಾಖಂಡನ,' 'ಭಾಮಿನೀ ವಿಲಾಸ' 'ಮನೋರಮಾ ಕುಚಮರ್ದನ' 'ಅಮೃತಲಹರೀ' 'ಕರುಣಾಲಹರೀ' 'ಪೀಯೂಷಲಹರೀ' 'ಗಂಗಾಲಹರೀ,' 'ಸುಧಾಲಹರೀ' 'ಲಕ್ಷ್ಮೀಲಹರೀ' 'ಪ್ರಾಣಾಭರಣ' 'ಜಗದಾಭರಣ"–ಇತ್ಯಾದಿ.

ಈ ಕವಿಯ "ರಸಗಂಗಾಧರವು" ಅನ್ಯಾದೃಶವಾದ ಆಲಂಕಾರ ಗ್ರಂಥ. ಆದರಲ್ಲಿ ಉದಾಹರಣೆಗಾಗಿಯೂ ಕೂಡ ಬೇರೆ ಕವಿ

ಗಳ ಶ್ಲೋಕಗಳನ್ನು ಕೂಡದ ಸ್ವಕಪೋಲ ಕಲ್ಪಿತವಾದ ಶ್ಲೋಕಗಳನ್ನೇ ಕೊಟ್ಟಿರುತ್ತಾನೆ. ಆವನು ಗ್ರಂಥಾರಂಭದಲ್ಲಿ ಈ ರೀತಿ ಪ್ರತಿಜ್ಞೆ ಮಾಡಿ ಅನಂತರ ಈ ಗ್ರಂಥವನ್ನು ರಚಿಸಿರುತ್ತಾನೆ.

"ನಿರ್ಮಾಯ ನೂತನಮುದಾಹರಣಾನು
ರೂಪಂ
ಕಾವ್ಯಂ ಮಯಾತ್ರ ನಿಹಿತಂ ನ ಪರಸ್ಯ
ಕಿಂಚಿತ್ ।
ಕಿಂಸೇವ್ಯತೇ ಸುಮನಸಾಂ ಮನಸಾತಿ
ಗಂಧಃ
ಕಸ್ತೂರಿಕಾ ಜನನ ಶಕ್ತಿ ಭೃತಾ
ಮೃಗೇಣ" ॥

ಇವನ 'ಗಂಗಾಲಹರಿಯು' ಅತ್ಯುತ್ತಮವಾದ ಹಾಗೂ ಸುಪ್ರಸಿದ್ಧವಾದ ಸ್ತೋತ್ರ. ಅಸಂಖ್ಯಾತ ಜನರು ಇದನ್ನು ಪ್ರತಿದಿನ ಭಕ್ತಿಯಿಂದ ಪಠಿಸುತ್ತಾರೆ.

ಈತನ ಭಾಮಿನೀ ವಿಲಾಸವು 'ಅಪೂರ್ವವಾದ ಗ್ರಂಥ', ಇದು 'ರಘುವಂಶ' 'ಕುಮಾರಸಂಭವ' 'ಕಿರಾತಾರ್ಜುನೀಯ' ಮೊದಲಾದ ಮಹಾಕಾವ್ಯಗಳಂತೆ ಇರದೆ ತನ್ನದೇ ಆದ ವಿಶೇಷತೆಯಿಂದ ಶೋಭಿಸುತ್ತದೆ. ಇದು ಪ್ರಧಾನವಾಗಿ ಮುಕ್ತಕ ಶ್ಲೋಕಗಳನ್ನೇ ಒಳಗೊಂಡಿದೆ. ಇದಕ್ಕೆ ಕಾರಣವನ್ನು ಸ್ವಯಂ ಕವಿಯೇ ತನ್ನ ಗ್ರಂಥದ ಕೊನೆಯಲ್ಲಿ ವಿವರಿಸಿ ಗ್ರಂಥವನ್ನು ಉಪಸಂಹರಿಸಿರುತ್ತಾನೆ.

"ದುರ್ವೃತ್ತಾ ಜಾರ ಜನ್ಮಾನೋ
ಹರಿಷ್ಯಂತೀತಿ ಶಂಕಯಾ ।
ಮದೀಯಪದ್ಯ ರತ್ನಾನಾಂ
ಮಂಜೂಷೈಷಾ ಕೃತಾಮಯಾ" ॥

"ಅಯೋಗ್ಯರಾದ ಜನರು ಸಂದರ್ಭವೊದಗಿದಾಗ ಅಥವಾ ರಾಜಾಸ್ಥಾನದಲ್ಲಿ ತಮ್ಮ ಹಿರಿಮೆಯನ್ನು ಹೆಚ್ಚಿಸಿಕೊಳ್ಳಲು "ಈ ಶ್ಲೋಕವನ್ನು ರಚಿಸಿದವನು ನಾನೇ" ಎಂದು ಹೇಳಿಕೊಳ್ಳಬಹುದು. ಅವರು ಹಾಗೆ ಮಾಡದಿರಲೆಂದು. ಅದನ್ನು ನಿವಾರಿಸುವ ಉದ್ದೇಶದಿಂದಲೇ ನಾನು ವಿನೋದಕ್ಕಾಗಿ ಆಗಾಗ ರಚಿಸಿದ ಶ್ಲೋಕಗಳನ್ನೇ ಗ್ರಂಥರೂಪದಲ್ಲಿ ರಚಿಸಿರುತ್ತೇನೆ"–ಎಂದು ತಿಳಿಸಿರುತ್ತಾನೆ.

ಅಲ್ಲದೆ ತನ್ನ ವಿಚಾರವಾಗಿ ಹೀಗೆ ಹೇಳಿಕೊಂಡಿದ್ದಾನೆ–

"ಶ್ರೀಮತ್‌ಜ್ಞಾನೇಂದ್ರಭಿಕ್ಷೋಃ
ಅಧಿಗತ ಸಕಲ ಬ್ರಹ್ಮವಿದ್ಯಾ ಪ್ರಪಂಚಃ
ಕಾಣಾದೀರಾಕ್ಷಪಾದೀರಪಿ ಗಹನ
ಗಿಶೋಯೋ ಮಹೇಂದ್ರಾದವೇದೀತ್ ।


## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ದೇವಾ ಪೇವಾಧ್ಯನಿಷ್ಟ ಸ್ಮರಹರ
ನಗರೇಶಾಸನಂ ಜೈಮಿನೀಯಂ
ಶೇಷಾಂಕ ಪ್ರಾಪ್ತ ಶೇಷಾಮಲ ಭಣಿರಿ
ರಭೂತ್ಸರ್ವ ವಿದ್ಯಾಧರೋ ಯಃ ||
ಪಾಷಾಣಾದಪಿ ಪೀಯೂಷಂ ಸ್ಯಂದತೇ
ಯಸ್ಯ ಲೀಲಯಾ |
ತಂ ವಂದೇ ಮೇರು ಭಟ್ಟಾಖ್ಯಂ ಲಕ್ಷ್ಮೀ
ಕಾಂತಂ ಮಹಾಗುರುಂ" ||

ಇದರಲ್ಲಿ 'ಅನ್ಯೋಕ್ತಿ ವಿಲಾಸ' (101) 'ಶೃಂಗಾರೋಲ್ಲಾಸ' (102) 'ಕರುಣವಿಲಾಸ' (19) 'ಶಾಂತವಿಲಾಸ' (32) ಎಂಬ ವಿಭಾಗಳಿವೆ. ಒಂದೊಂದು ವಿಲಾಸವೂ ಅಸದೃಶವಾಗಿವೆ. ಅನ್ಯೋಕ್ತ್ಯುಲ್ಲಾಸದ ಈ ಪದ್ಯವು ಅತಿ ಹೃದಯಂಗಮವಾಗಿದೆ.

"ನೀರ ಕ್ಷೀರ ವಿವೇಕೇ ಹಂಸಾಲಸ್ಯಂ
ತ್ವಮೇವ ತನುಷೇ ಚೇತ್ |
ವಿಶ್ವಸ್ಮಿನ್ನಧುನಾನ್ಯಃ ಕುಲವ್ರತಂ
ಪಾಲಯಿಷ್ಯತಿ ಕಃ ||

ಹಂಸವ್ಯಾಜ ದಿಂದ ಸಜ್ಜನರನ್ನು ಉದ್ದೇಶಿಸಿ, 'ನಿಜವಾದ ಯೋಗ್ಯತೆ ಮತ್ತು ಸಾಮರ್ಥ್ಯವಿರುವ ಜನರೇ ತಮ್ಮ ಕರ್ತವ್ಯವನ್ನು ನಿರ್ವಹಿಸದೇ ಇದ್ದ ಪಕ್ಷದಲ್ಲಿ, ಬೇರೆಯವರು ಆ ಕೆಲಸವನ್ನು ನಿರ್ವಹಿಸುವುದು ಸಾಧ್ಯವೇ? – ಎಂದು ಕವಿಯು ಪ್ರಶ್ನಿಸಿದ್ದಾನೆ. ಇದರಿಂದ ಲೋಕದಲ್ಲಿ ಸಜ್ಜನರು ಜನರ ನುಡಿಯನ್ನು ಗಮನಿಸದೆ ತಮ್ಮ ಕರ್ತವ್ಯದಲ್ಲಿ ತಾವು ನಿರತರಾಗಿರಬೇಕೆಂಬ ಕವಿಯ ಸಂದೇಶವು ಅಡಕವಾಗಿದೆ.

"ವಿದುಷಾಂ ವದನಾದ್ವಚಃ ಸಹಸಾ
ಯಾಂತಿ ನೋಬಹಿಃ |
ಯಾತಾಶ್ಚೇನ್ನಪರಾಂಚಂತಿ ದ್ವಿರದಾ
ನಾಂ ರದಾ ಇವ" ||

ವಿದ್ವಾಂಸರ ವದನಾರವಿಂದದಿಂದ ಮನ ಬಂದಂತೆ ಮಾತುಗಳು ಹೊರಡುವುದಿಲ್ಲ ಅವರು ಏನು ಹೇಳಬೇಕಾದರೂ ಸಾಕಷ್ಟು ಯೋಚಿಸಿ ಆಧಾರ ಪೂರ್ವಕವಾಗಿಯೇ ಹೇಳುತ್ತಾರೆ. ಅವು ಸಾರ್ಥಕವಾದ ಮಾತುಗಳೇ ಪರಂತು ನಿರರ್ಥಕವಾದುವಲ್ಲ. ಬಾಯಿಂದ ಒಂದು ಸಲ ಅದು ಹೊರಟ ಮೇಲೆ ಗಜೇಂದ್ರನ ದಂತದಂತೆ ಅನಪ್ಸರ್ಗ ದವು–ಸಾರ್ಥಕವಾದವು.

"ಪರೋಪಸರ್ಪಣಾನಂತ ಚಿಂತಾನಲ
ಶಿಖಾಶತೈಃ |
ಅಚುಂಬಿತಾಂತಃ ಕರಣಾಃ ಸಾಧು
ಜೀವಂತಿ ಪಾದಪಾಃ ||"

ಈ ಪದ್ಯವೂ ಅತಿ ಮನೋಹರವಾಗಿದೆ. ಇತರರನ್ನು ಆಶ್ರಯಿಸುವಾಗ ನೂರಾರು ಚಿಂತೆಯೆಂಬ ಜ್ವಾಲೆಯಿಂದ ದಗ್ಧರಾಗುವ ಯೋಗ್ಯ ಜನರಿಗಿಂತಲೂ. ಯಾರನ್ನೂ ಆಶ್ರಯಿಸದಿರುವ. ಸ್ವತಂತ್ರವಾಗಿ ಜೀವಿಸುವ ವೃಕ್ಷಗಳೇ ಲೋಕದಲ್ಲಿ ಶ್ರೇಷ್ಠವೆಂದು ಕವಿಯು ಬಹಳ ಸೊಗಸಾಗಿ ಪರಾಶ್ರಯದ ತೊಡಕನ್ನು ಚಿತ್ರಿಸಿದ್ದಾನೆ.

ಶೃಂಗಾರೋಲ್ಲಾಸವೂ ಅತಿಮನೋಹರವಾಗಿದೆ. ಅದರಲ್ಲಿ ಕವಿ ಹೀಗೆ ಹೇಳಿದ್ದಾನೆ.

"ನ ಮನಾಗಪಿ ರಾಹುರೋಷ ಶಂಕಾ
ನಕಲಂಕಾನುಗಮೋನ ಪಾಂಡುಭಾವಃ |
ಉಪಚೀಯತ ಏವ ಕಾಪಿ ಶೋಭಾ ಪರಿ
ಶೋಭಾಮಿನಿತೇ ಮುಖಸ್ಯ ನಿತ್ಯಂ" ||

ಕವಿಗಳು ಸಾಮಾನ್ಯವಾಗಿ ಕಾಮಿನೀ ಮುಖ ಕಮಲವನ್ನು ಚಂದ್ರನಿಗೆ ಹೋಲಿಸುತ್ತಾರೆ. ಆ ಚಂದ್ರನಲ್ಲಿ ಕಳಂಕವುಂಟು. ಆಗಾಗ ರಾಹುವು ಬಂದು ಪೀಡಿಸುವುದೂ ಉಂಟು. ಆದರೆ ಈ ಮುಖಚಂದ್ರನಲ್ಲಿ ಈ ಯಾವ ದೋಷವೂ ಇಲ್ಲ. ಇದು ವಿಕಾರರಹಿತವಾದದ್ದು. ಅಲ್ಲದೆ ಅನಿರ್ವಾಚ್ಯವಾದ ಕಾಂತಿಯು ಇದರಲ್ಲಿ ದಿನೇದಿನೇ ವೃದ್ಧಿಯಾಗುತ್ತಲಿದೆ– ಎಂದು ತಿಳಿಸಿ ಆ ಪ್ರಸಿದ್ಧ ಚಂದ್ರನಿಗಿಂತ ವಿಶೇಷ ಗುಣಗಳನ್ನು ಇಲ್ಲಿ ಆರೋಪಿಸಿದ್ದಾನೆ.

"ಉಪನಿಷದಃ ಪರಿಪೀತಾಃ ಗೀತಾಪಿ
ಹಂತಮತಿಪಥಂ ನೀತಾ |
ಕದಪಿಸಹಾ ವಿಧುವದನಾಮಾನಸ
ಸದನಾದ್ಬಹಿರ್ಯಾತಿ ||"

ಉಪನಿಷತ್ತುಗಳನ್ನು ಅಧ್ಯಯನ ಮಾಡಿ ಆಯಿತು. ಗೀತೆಯನ್ನು ಪಠಿಸಿ ಮುಗಿಸಿ ಆಯಿತು. ಆದರೂ ಸಹ ಚಂದ್ರವದನೆಯಾದ ಪ್ರೇಯಸಿಯು ನನ್ನ ಮನಸ್ಸನ್ನು ಬಿಟ್ಟು ಹೊರ ಹೊರಡಲಿಲ್ಲ. ಎಷ್ಟೇ ಜ್ಞಾನವನ್ನು ಸಂಪಾದಿಸಿದರೂ ಪ್ರೇಯಸಿಯನ್ನು ಮರೆಯುವುದು ಶ್ರಮಸಾಧ್ಯ. ಎಂಬುದು ಈ ಶ್ಲೋಕದ ಅಭಿಪ್ರಾಯ.

ಕರುಣ ವಿಲಾಸದ ಈ ಪದ್ಯವು ಎಲ್ಲರ ಮನಸ್ಸನ್ನೂ ಕರಗಿಸುತ್ತದೆ.

"ಭೂಪಿತಾಸ್ಥಿತಾ ರಮಣನಾಥ ಮನೋ
ಹರೇತಿ ಸಂಬೋಧನೈರ್ಯಾಮಧಿರೋ
ಪಿತವತ್ಯಸಿದ್ದಾಂಶಿ |
ಸ್ವರ್ಗಂಗತಾ ಕಥಮಿವ ಕ್ಷಿಪಸಿ ತ್ವಮೇಣ
ಶಾವಾಕ್ಷಿತಂ ಧರಣಿಧೂಲಿಷು ಮಾ ಮಿ
ದಾನೀಂ ||"

ಪ್ರೇಯಸಿಯು ದಿವಂಗತಳಾದ ಮೇಲೆ ಅವಳನ್ನು ಸ್ಮರಿಸಿಕೊಂಡು ನಾಯಕನು ಹೀಗೆ ಪರಿತಪಿಸುತ್ತಾನೆ. "ನೀನು ಈ ಲೋಕದಲ್ಲಿದ್ದಾಗ ರಮಣ, ನಾಥ, ಮನೋಹರ, ಎಂದೆಲ್ಲಾ ನನ್ನನ್ನು ಕರೆಯುತ್ತಿದ್ದೆ. ಈಗ ನಾನು ನೆಲದ ಮೇಲೆ ಹೊರಳಾಡುತ್ತಿರುವುದನ್ನು ನೋಡಿಕೊಂಡು ನೀನು ಹೇಗೆ ತಾನೆ ಸಹಿಸಿಕೊಂಡಿರುತ್ತಿಯೆ?"

ಶಾಂತ ವಿಲಾಸದ ಈ ಶ್ಲೋಕವು ಎಷ್ಟು ಮನೋಜ್ಞವಾಗಿದೆ!

"ಸಂಪಾದಯಾಮಿ ಕಿಮಹಂ ಧಾವಂ
ಧಾವಂ ಧರಾತಲೇಯದಯಂ |
ಅಸ್ತಿಮಮ ಶಿರಸಿ ಸತತಂ ನಂದ
ಕುಮಾರಃ ಪ್ರಭುಃ ಪರಮಃ ||"

ನಾನು ಸುತ್ತಾಡಿ, ಅಲೆದಾಡಿ, ಏನುಮಾಡಲಿ ಹೇಗೆ ಸಂಪಾದಿಸಲಿ, ಎಂದು ಇದುವರೆಗೂ ಒದ್ದಾಡಿದೆನು. ಕೊನೆಗೆ ಈ ಅಲೆದಾಟದಿಂದ ನೆಮ್ಮದಿ ಇಲ್ಲವೆಂದು ತಿಳಿಯಿತು. ಆ ನೆಮ್ಮದಿಯನ್ನು ಶಾಶ್ವತವಾಗಿ ಕೊಡಬಲ್ಲ ಶ್ರೀ ಕೃಷ್ಣ ಪರಮಾತ್ಮನ ಪಾದಾರವಿಂದವು ಸರ್ವದಾ ನನ್ನತಲೆಯ ಮೇಲಿದೆ. ಕೊನೆಯದಾಗಿ ಈ ರೀತಿಯಾಗಿ ತಿಳಿಸಿ ತನ್ನ ಗ್ರಂಥವನ್ನು ಉಪಸಂಹರಿಸಿರುತ್ತಾನೆ.

( 30ನೇ ಪುಟ ನೋಡಿ )

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10-30 ರಿಂದ 1-00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ಧರ್ಮವ್ಯಾಧನ ಕಥೆ

ಡಾ॥ ಎನ್. ಅನಂತರಂಗಾಚಾರ್

ಭಾರತವು ಪುಣ್ಯಭೂಮಿ. ಅನಾದಿಕಾಲದಿಂದ ಇಲ್ಲಿಯ ಜನಜೀವನದಲ್ಲಿ ಧರ್ಮಕ್ಕೆ ಪ್ರಧಾನಸ್ಥಾನವಿದೆ. ತೈತ್ತಿರೀಯ ಉಪನಿಷತ್ತಿನಲ್ಲಿ 'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ ಲೋಕೇ ಧರ್ಮಿಷ್ಠಂ ಪ್ರಜಾ ಉಪಸರ್ಪಂತಿ, ಧರ್ಮೇಣಪಾಪಮಪನುದತಿ, ಧರ್ಮೇಸರ್ವಂ ಪ್ರತಿಷ್ಠಿತಂ, ತಸ್ಮಾತ್ ಧರ್ಮಂ ಪರಮಂ ವದಂತಿ'– ಅಂದರೆ 'ವಿಶ್ವಜಗತ್ತಿನ ಪ್ರತಿಷ್ಠೆಯೇ ಧರ್ಮ, ಲೋಕದಲ್ಲಿ ಧರ್ಮಿಷ್ಠರಾದವರನ್ನು ಜನರು ಉಪಸರ್ಪಣ ಮಾಡುತ್ತಾರೆ ಧರ್ಮದಿಂದ ಪಾಪ ಪರಿಹಾರವಾಗುತ್ತದೆ ಧರ್ಮದಲ್ಲಿಯೇ ಎಲ್ಲವೂ ಪ್ರತಿಷ್ಠಿತವಾಗಿವೆ ಆದುದರಿಂದ ಧರ್ಮವೇ ಶ್ರೇಷ್ಠವಾದುದು ಎಂದು ಹೇಳುತ್ತಾರೆ' ಎಂದು ಹೇಳುತ್ತದೆ. ಇದೇ ಧರ್ಮವನ್ನು ಕುರಿತು ಋಗ್ವೇದ, ಐತ್ತರೇಯ ಬ್ರಾಹ್ಮಣ, ಛಾಂದೋಗ್ಯೋಪನಿಷತ್ತುಗಳಲ್ಲಿಯೂ ಉಕ್ತವಾಗಿದೆ. ವೇದೋಪಬೃಹ್ಮಣಾರ್ಥವಾಗಿರುವ ಇತಿಹಾಸಗಳಲ್ಲಿಯೂ ಇದರ ಮೇಲ್ಮೆ ವ್ಯಕ್ತವಾಗಿದೆ. ರಾಮಾಯಣದಲ್ಲಿ 'ಧರ್ಮಾದರ್ಥಃ ಪ್ರಭವತೇ ಧರ್ಮಾತ್ ಪ್ರಭವತೇ ಸುಖಮ್। ಧರ್ಮೇಣ ಲಭತೇ ಸರ್ವಂ, ಧರ್ಮಸಾರಮಿದಂ ಜಗತ್' ಎಂದು ಹೇಳಿದೆ. ಭಗವದ್ಗೀತೆಯಲ್ಲಿ 'ಯದಾ ಯದಾಹಿ ಧರ್ಮಸ್ಯಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥ ಎಂದು ಕೃಷ್ಣಪರಮಾತ್ಮನು ಘೋಷಿಸಿದ್ದಾನೆ. ಇವುಗಳಲ್ಲೆಲ್ಲ ಉತ್ತಮವಾಗಿರುವ ಧರ್ಮದ ಅರ್ಥವೇನು? ಸಾಧುಗಳಾರು? ದುಷ್ಕೃತರಾರು? ಧರ್ಮದ ಅರ್ಥ ಒಂದೊಂದೆಡೆಯಲ್ಲಿಯೂ ಬೇರೆ ಬೇರೆ. ಮೂಲಾರ್ಥದಲ್ಲಿ ಅದು ಪ್ರಪಂಚಕ್ಕೆ ಶಕ್ತಿ ಎಂದು ಅರ್ಥವಾಗಿದೆ. ಮುಂದೆ ಅದರ ಅರ್ಥ ವ್ಯಾಪಕವಾಗಿ ನ್ಯಾಯ, ನೀತಿ, ಕರ್ತವ್ಯ, ನಡತೆ, ಎಲ್ಲವೂ ಅದರ ವ್ಯಾಪ್ತಿಯಲ್ಲಿ ಅಡಕವಾಗುತ್ತದೆ. ಧರ್ಮದ ರೂಪವು ಏಕರೀತಿಯಲ್ಲ. ಅದು ಕಾಲ, ದೇಶ, ಆಶ್ರಮ, ವ್ಯಕ್ತಿಗಳಲ್ಲಿ ಬೇರೆ ಬೇರೆ ಆಕಾರವನ್ನು ಪಡೆಯುತ್ತದೆ. ಧರ್ಮಶಾಸ್ತ್ರಕಾರರು ಧರ್ಮವು ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ನೈಮಿತ್ತಿಕ ಧರ್ಮ, ಗುಣಧರ್ಮ ಎಂಬ ಐದು ಭಾಗಗಳಲ್ಲಿ ಕರ್ತವ್ಯಗಳನ್ನು ನಿರ್ಣಯಿಸತಕ್ಕದ್ದೆಂದು ನಿಶ್ಚಯಿಸಿದ್ದಾರೆ. ಇದರ ಒಂದು ಮುಖವು ಮಹಾಭಾರತದ ವನಪರ್ವದಲ್ಲಿ ಬರುವ ಧರ್ಮವ್ಯಾಧ ಪ್ರಕರಣದಿಂದ ವಿಶದೀಕೃತವಾಗಿದೆ. ಅದನ್ನು ಮುಂದೆ ಸಂಗ್ರಹವಾಗಿ ನಿರೂಪಿಸಿದೆ.

ಹಿಂದೆ ವೇದಾಧ್ಯಯನ ಸಂಪನ್ನನೂ ತಪೋನಿಷ್ಠನೂ ಆದ ಕೌಶಿಕನೆಂಬ ಬ್ರಾಹ್ಮಣೋತ್ತಮನಿದ್ದನು. ಅವನು ತಾನು ಸರ್ವಶಕ್ತನೆಂದು ಭಾವಿಸುತ್ತ ಒಂದು ಆಲದ ಮರದ ಕೆಳಗೆ ಮಲಗಿದ್ದನು. ಅದರ ಮೇಲೆ ಒಂದು ಬಕಪಕ್ಷಿಯು ಕುಳಿತಿದ್ದು ಇದ್ದಕ್ಕಿದ್ದ ಹಾಗೆ ಪಿಕ್ಕೆಯನ್ನು ಹಾಕಿತು. ಅದು ಕೌಶಿಕನ ಎದೆಯ ಮೇಲೆ ಬಿದ್ದಿತು. ಅವನು ಕೋಪಾವಿಷ್ಟನಾಗಿ ಅದನ್ನು ಕ್ರೂರದೃಷ್ಟಿಯಿಂದ ನೋಡಿದನು. ಅದು ತಕ್ಷಣ ಸತ್ತು ನೆಲಕ್ಕುರುಳಿತು. ಕೌಶಿಕನು ತಾನು ನಿಜವಾಗಿಯೂ ಶಕ್ತಿವಂತನೆಂದೇ ಭಾವಿಸಿಕೊಂಡನು. ಆದರೂ ತಾನು ಮಾಡಿದ ಕೆಲಸ ಧರ್ಮವೇ ಎಂಬ ಶಂಕೆಯಿದ್ದೇ ಇದ್ದಿತು.

ಅವನು ಪ್ರತಿದಿನದಂತೆ ಮುಂದಿನ ದಿನ ಭಿಕ್ಷಾಟನಕ್ಕೆ ಹೊರಟು ಒಬ್ಬ ಬ್ರಾಹ್ಮಣನ ಮನೆಯ ಮುಂದೆ ಹೋಗಿ ನಿಂತು 'ಭವತಿ ಭಿಕ್ಷಾಂದೇಹಿ' ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಆ ಮನೆಯ ಬ್ರಾಹ್ಮಣಿಯು ಬಹುಭಕ್ತಿಯಿಂದ ಪ್ರತಿದಿನವೂ ಆದಷ್ಟು ಬೇಗನೆ ಭಿಕ್ಷೆಯನ್ನು ಹಾಕುತ್ತಿದ್ದಳು. ಆ ದಿನ ಕೌಶಿಕನು ಕೂಗಿದಾಗ ಅವಳು ಭಿಕ್ಷೆಹಾಕುವ ಪಾತ್ರೆಯನ್ನು ತೊಳೆಯುತ್ತಿದ್ದಳು. ಆ ವೇಳೆಗೆ ಸರಿಯಾಗಿ ಅವಳ ಪತಿಯು ಹೊರಗಿನಿಂದ ವಿಶೇಷವಾಗಿ ದಣಿದು ಒಳಕ್ಕೆ ಬಂದನು. ಪತಿವ್ರತಾಶಿರೋಮಣಿಯಾದ ಅವಳು ತಾನು ತೊಳೆಯುತ್ತಿದ್ದ ಪಾತ್ರೆಯನ್ನು ಹಾಗೆಯೇ ಕೆಳಗಿಟ್ಟು ಹೊರಗಿದ್ದ ಬ್ರಾಹ್ಮಣನಿಗೆ 'ನಿಲ್ಲು' ಎಂದು ಹೇಳಿ ಪತಿಗೆ ಅರ್ಘ್ಯಪಾದ್ಯಗಳನ್ನು ಕೊಟ್ಟು ಸುಖಾಸೀನವನ್ನಿತ್ತು ಹಿತಕರವಾದ ಆಹಾರವನ್ನುಣಿಸಿ ಸತ್ಕರಿಸಿದಳು. ಈ ಸಂಭ್ರಮದಲ್ಲಿ ಅವಳಿಗೆ ಕೌಶಿಕನು ಬಂದಿರುವುದು ಮರೆತೇ ಹೋಯಿತು. ಪತಿಗೆ ತಾಂಬೂಲದಾನ ಮಾಡುತ್ತಿರುವ ಸಮಯದಲ್ಲಿ ಅಕಸ್ಮಾತ್ ಕೌಶಿಕನ ಜ್ಞಾಪಕ ಬಂದು ತನ್ನ ಮರವೆಗಾಗಿ ತಾನೇ ಹಳಿದುಕೊಂಡು ಬ್ರಾಹ್ಮಣನಿಗೆ ಅಪಚಾರವಾಯಿತೆಂದು ಬಹು ಚಚ್ಚರದಿಂದ ಪಾತ್ರೆಯನ್ನು ತೊಳೆದು ಭಿಕ್ಷಾನ್ನವನ್ನು ತೆಗೆದುಕೊಂಡು ಹೋಗಿ ಕೌಶಿಕನ ಜೋಳಿಗೆಗೆ ಹಾಕಲು ಹೋದಳು. ಕೌಶಿಕನಿಗೆ ಅಷ್ಟು ಕಾಲವಾದುದರಿಂದ ಕೋಪವು ನೆತ್ತಿಗೇರಿತ್ತು. ಅವನು ಬ್ರಾಹ್ಮಣಿಯನ್ನು ನೋಡಿ, ಸಾಧ್ವೀ 'ನಿಲ್ಲು' ಎಂದು ಹೇಳಿದ ಮೇಲೆ ತಕ್ಷಣ ನನಗೆ ಭಿಕ್ಷೆಯನ್ನಿಟ್ಟು ಕಳುಹಿಸಬೇಡವೇ? ಇದೇಕೆ ಹೀಗೆ ಮಾಡಿಬಿಟ್ಟೆ – ಎಂದು ಗದರಿಸಿದನು. ಬ್ರಾಹ್ಮಣಿಗೆ ಅವನಿಗೆ ಕೋಪ ಬಂದಿದೆಯೆಂಬುದು ಅರ್ಥವಾಯಿತು. ಅವನಿಗೆ ಸಮಾಧಾನ ಮಾಡುವುದಕ್ಕಾಗಿ ವಿನಯಾನ್ವಿತಳಾಗಿ 'ವಿದ್ವಾಂಸನೇ, ನಾನು ನಿನಗೆ ಮಾಡಿದ ಅಪಚಾರವನ್ನು ಕ್ಷಮಿಸಲು ನೀನು ಅರ್ಹನಾಗಿದ್ದೀಯೆ. ನಾನು ನಿನಗೆ ಉದ್ದೇಶಪೂರ್ವಕವಾಗಿ ಭಿಕ್ಷೆಯಿಡಲು ತಡಮಾಡಲಿಲ್ಲ. ನಿನಗೆ ಭಿಕ್ಷೆಯಿಡಲು ಪಾತ್ರೆಯನ್ನು ತೊಳೆಯುತ್ತಿರುವ ವೇಳೆಗೆ ಸರಿಯಾಗಿ ಬಳಲಿದ್ದ ನನ್ನ ಪತಿಯು ಮನೆಯೊಳಗೆ ಬಂದನು. ಪತಿಯೇ ನನಗೆ ಪರದೈವ. ಅವನಿಗೆ ಆ ಸಮಯದಲ್ಲಿ ಊಟವಿಟ್ಟು, ಉಪಚರಿಸುವುದು ನನ್ನ ಪ್ರಥಮ ಧರ್ಮ. ನನ್ನ ಕರ್ತವ್ಯವನ್ನು ಮುಗಿಸಿದ ತಕ್ಷಣ ನಿನಗೆ ಭಿಕ್ಷೆ ನೀಡಲು ಬಂದಿದ್ದೇನೆ' ಎಂದಳು. ಆದಕ್ಕೆ ಕೌಶಿಕನು 'ಹಾಗಾದರೆ ಬ್ರಾಹ್ಮಣರು ನಿನಗೆ ಶ್ರೇಷ್ಠರಲ್ಲವೇ? ಅವರಿಗಿಂತಲೂ ನಿನ್ನ ಪತಿಯೇ ಶ್ರೇಷ್ಠನೇ, ಬ್ರಾಹ್ಮಣಪೂಜೆಗಿಂತಲೂ ಪತಿಸೇವೆಯು ಹೆಚ್ಚಿನದೇ? ಎಲೈ ಗರ್ವಿಷ್ಠಳೇ, ವೃದ್ಧರ ಸೇವೆ ಮಾಡಿ ಅವರಿಂದ ಹಿತೋಪದೇಶವನ್ನು ಪಡೆಯದಿರುವುದರಿಂದ ಈ ಧರ್ಮದ ರಹಸ್ಯವು ತಿಳಿಯದಿದೆ. ಅವರು ಕುಪಿತರಾದರೆ ಈ ಪೃಥ್ವಿಯನ್ನು ಸುಟ್ಟುಬಿಟ್ಟಾರು' ಎಂದು ಗರ್ಜಿಸಿದನು. ಅದಕ್ಕೆ ಬ್ರಾಹ್ಮಣಿಯು "ಬ್ರಾಹ್ಮಣೋತ್ತಮ, ಸುಟ್ಟುಬಿಡಲು ನಾನೇನು ಬಕಪಕ್ಷಿ

ಯಲ್ಲ ನಿನ್ನ ಕೋಪವು ನನ್ನನ್ನೇನೂ ಮಾಡಲಾರದು. ನಿನ್ನ ಕ್ರೂರದೃಷ್ಟಿಯು ನನ್ನನ್ನು ದಹಿಸಲಾರದು. ನಾನು ಬ್ರಾಹ್ಮಣರನ್ನು ಎಂದೂ ಅನಾದರಕ್ಕೆ ಮಾಡಿಲ್ಲ. ಅವರು ಪೂಜ್ಯರು ಎಂಬುದು ತಿಳಿದಿವೆ ಕೋಪಾವಿಷ್ಟರಾದ ಬ್ರಾಹ್ಮಣರಿಂದ ಹಿಂದೆ ಅನೇಕ ಅನಾಹುತಗಳಾಗಿವೆ ದಯೆ, ಕ್ಷಮೆ, ಅನುಗ್ರಹ ಇವು ಬ್ರಾಹ್ಮಣರಿಗೆ ಪ್ರಧಾನ ಲಕ್ಷಣಗಳು. ನನ್ನ ಪಾಲಿಗೆ ಪತಿಶುಶ್ರೂಷೆಯೇ ಧರ್ಮ, ಅದೇ ಪರಮಶ್ರೇಷ್ಠವೆಂದು ನಾನು ಭಾವಿಸಿದ್ದೇನೆ. ನನ್ನ ಪಾಲಿಗೆ ಪತಿಯೇ ಪರದೈವ ಪತಿಶುಶ್ರೂಷಾಧರ್ಮಕ್ಕಿಂತಲೂ ಬೇರೆ ಧರ್ಮ ನನಗೆ ತಿಳಿಯದು. ನೀನು ಮಾಡಿದ ಬಲಾಕಾ ಪಕ್ಷಿಯ ವಧೆಯು ನನ್ನ ಪತಿಸೇವಾಫಲದಿಂದಲೇ ನನಗೆ ತಿಳಿದುದು ನಿನ್ನ ತಪಸ್ಸು ಮತ್ತು ವೇದಾಧ್ಯಯನದ ಜೊತೆಗೆ ಕೆಲವು ಧರ್ಮದ ರಹಸ್ಯಗಳನ್ನು ತಿಳಿದುಕೊಳ್ಳಬೇಕು. ಮನುಷ್ಯನಿಗೆ ಕೋಪವೇ ಪರಮಶತ್ರು. ಕ್ರೋಧ, ಮೋಹವನ್ನು ತ್ಯಜಿಸಿರುವವನೇ ನಿಜವಾದ ಬ್ರಾಹ್ಮಣ ಸತ್ಯವಂತನೂ, ಜಿತೇಂದ್ರಿಯನೂ, ದಯಾಪರನೂ ದಾನಿಯೂ, ಉದಾರಿಯೂ,ಸ್ವಾಧ್ಯಾಯಪರನೂ, ಕಪಟವಿಲ್ಲದಿರುವವನೂ, ಮಾತ್ರ ಬ್ರಾಹ್ಮಣ ಧರ್ಮದ ರಹಸ್ಯವನ್ನು ತಿಳಿಯುವುದು ದುಃಸಾಧ್ಯವಾದ ಕೆಲಸ ನೀನು ಅಧ್ಯಯನಶೀಲನೂ, ತಪಸ್ವಿಯೂ ಆಗಿರಬಹುದು. ಆದರೆ ಧರ್ಮರಹಸ್ಯವನ್ನು ಮಾತ್ರ ತಿಳಿದಿಲ್ಲವೆಂದು ಹೇಳಬೇಕಾಗುತ್ತದೆ ನೀನು ಶ್ರೇಷ್ಠವಾದ ತತ್ತ್ವಮೂಲವಾದ ಸೂಕ್ಷ್ಮವಾದ ಧರ್ಮರಹಸ್ಯವನ್ನು ತಿಳಿಯಬೇಕಾದರೆ ಮಾತಾಪಿತೃಶುಶ್ರೂಷೆಯಲ್ಲಿ ಸರ್ವದಾ ನಿರತನಾಗಿರುವವನೂ, ಸತ್ಯಸಂಧನೂ, ಜಿತೇಂದ್ರಿಯನೂ, ಮಿಥಿಲಾವಾಸಿಯೂ ಆದ ಧರ್ಮವ್ಯಾಧನಲ್ಲಿ ಧರ್ಮರಹಸ್ಯದ ವಿಷಯವಾಗಿ ಪ್ರಶ್ನಿಸು ಅವನು ಅದನ್ನು ವಿವರವಾಗಿ ತಿಳಿಸುತ್ತಾನೆ. ನಿನಗೆ ವಿರಾಮವಾದಾಗ ಹೋಗು" ಎಂದಳು

ಬ್ರಾಹ್ಮಣಿಯ ಮಾತುಗಳನ್ನು ಕೇಳಿ ಕೌಶಿಕನಿಗೆ ಆಶ್ಚರ್ಯವಾಯಿತು ಅವಳ ಹಿತವಚನದಿಂದ ಅವನ ಕೋಪವು ಮಾಯವಾಯಿತು ಅವಳಿಗೆ ತನ್ನ ಧನ್ಯವಾದಗಳನ್ನು ಅರ್ಪಿಸಿದನು ಧರ್ಮವ್ಯಾಧನಲ್ಲಿಗೆ ಹೋಗುವುದಾಗಿ ಅವಳಿಗೆ ತಿಳಿಸಿದನು ಬ್ರಾಹ್ಮಣಿಯು ಭಿಕ್ಷೆಯನ್ನಿತ್ತು ಕಳುಹಿಸಿದಳು

ಮನೆಗೆ ಹೋದಮೇಲೆ ಕೌಶಿಕನಿಗೆ ಬ್ರಾಹ್ಮಣಿಯ ಹಿತೋಪದೇಶದ ವಿಷಯವಾಗಿಯೇ ಚಿಂತೆ ಧರ್ಮವ್ಯಾಧನಲ್ಲಿಗೆ ಹೋಗಬೇಕೆಂಬ ತವಕ ಹೆಚ್ಚಿತು. ತನ್ನ ಅಜ್ಞಾನದ ವಿಷಯವಾಗಿ ತನ್ನನ್ನು ಹಳಿದುಕೊಂಡನು ವ್ಯಾಧನನ್ನು ಹುಡುಕಿಕೊಂಡು ಮಿಥಿಲೆಗೆ ಹೊರಟೇಬಿಟ್ಟನು ಬಹು ಸುಂದರವಾದ ಮಿಥಿಲಾಪಟ್ಟಣಕ್ಕೆ ಹೋಗಿ ಅಲ್ಲಿಯ ರಾಜಬೀದಿಗಳಲ್ಲೆಲ್ಲಾ ಹುಡುಕಿ ಕಂಡವರನ್ನೆಲ್ಲ ಧರ್ಮವ್ಯಾಧನ ವಿಷಯವಾಗಿ ಕೇಳಿ ಕೊನೆಗೆ ಪ್ರಾಣಿವಧೆಮಾಡುವ ಸ್ಥಳದಲ್ಲಿ ಇದ್ದ ಧರ್ಮವ್ಯಾಧನನ್ನು ಕಂಡನು ತಪಸ್ವಿಯಾದ ಧರ್ಮವ್ಯಾಧನು ಆ ಸಮಯದಲ್ಲಿ ಹಂದಿಯ ಮಾಂಸವನ್ನೂ ಎಮ್ಮೆಯ ಮಾಂಸವನ್ನೂ ಮಾರುತ್ತಿದ್ದನು. ಬ್ರಾಹ್ಮಣನು ದೂರದಲ್ಲಿಯೇ ನಿಂತಿದ್ದರೂ ಧರ್ಮವ್ಯಾಧನಿಗೆ ಬ್ರಾಹ್ಮಣನೊಬ್ಬನು ತನ್ನ ದರ್ಶನಕಾಗಿ ಬಂದಿರುವ ವಿಷಯವು ತಿಳಿದು ಸಂಭ್ರಮದಿಂದ ಎದ್ದು ನಿರ್ಜನ ಪ್ರದೇಶದಲ್ಲಿದ್ದ ಬ್ರಾಹ್ಮಣನನ್ನು ಸಮೀಪಿಸಿ ಅವನಿಗೆ ನಮಸ್ಕರಿಸಿ ವಿನಯಪೂರ್ವಕವಾಗಿ ಹೇಳಿದನು. "ಬ್ರಾಹ್ಮಣೋತ್ತಮ, ನಿಮಗೆ ನಮಸ್ಕಾರ, ಸುಸ್ವಾಗತ ನಾನೊಬ್ಬ ವ್ಯಾಧ. ನಾನು ಏನು ಮಾಡಬೇಕೆಂಬುದನ್ನು ಆಜ್ಞಾಪಿಸಿ ಪತಿವ್ರತೆಯಾದ ಬ್ರಾಹ್ಮಣಿಯು ನಿಮ್ಮನ್ನು ಮಿಥಿಲಾಪಟ್ಟಣಕ್ಕೆ ಹೋಗೆಂದು ಹೇಳಿದ ವಿಷಯವು ನನಗೆ ತಿಳಿದಿದೆ. ನೀವು ಏತಕ್ಕೆ ಇಲ್ಲಿಗೆ ಬಂದಿರುವಿರೆಂಬುದೂ ನನಗೆ ಗೊತ್ತು"

ಧರ್ಮವ್ಯಾಧನ ಮಾತನ್ನು ಕೇಳಿದೊಡನೆಯೇ ಬ್ರಾಹಣನಿಗೆ (ಕೌಶಿಕ) ಆದ ಆಶ್ಚರ್ಯ ಅಷ್ಟಿಷ್ಟಲ್ಲ. ತನ್ನಲ್ಲಿ ತಾನೇ 'ಇದು ನಿಶ್ಚಯವಾಗಿಯೂ ನಾನು ನನ್ನ ಜೀವನದಲ್ಲಿ ಕಂಡ ಎರಡನೆಯ ಆಶ್ಚರ್ಯ' ಎಂದುಕೊಂಡ.

ಕೌಶಿಕನು ಯೋಚಿಸುತ್ತಿರುವಾಗಲೇ ವ್ಯಾಧನು ಕೌಶಿಕನು ನಿಲ್ಲುವುದಕ್ಕೆ ಅದು ಯೋಗ್ಯವಾದ ಸ್ಥಳವಲ್ಲವೆಂದು ಹೇಳಿ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು

ಸುಖಾಸೀನನಾದ ಕೌಶಿಕನು ವ್ಯಾಧನನ್ನು ಕುರಿತು "ನಿಮ್ಮಂತಹವರಿಗೆ ಈ ಮಾಂಸವಿಕ್ರಯ ವೃತ್ತಿ ಉಚಿತವಲ್ಲ. ನೀವು ಇದನ್ನು ಮಾಡುತ್ತಿರುವುದು ನನಗೆ ಬಹಳ ವ್ಯಸನವಾಗುತ್ತಿದೆ" ಎಂದನು. ಅದಕ್ಕೆ ವ್ಯಾಧನು 'ಬ್ರಾಹ್ಮಣೋತ್ತಮ, ಇದು ನನ್ನ ಕುಲೋಚಿತವಾದ ವೃತ್ತಿ, ನನ್ನ ತಾತ ಮುತ್ತಾತರಿಂದ ಬಂದುದು. ಇದೇ ನನಗೆ ಶ್ರೇಷ್ಠವಾದ ಕರ್ಮ. ಈ ವೃತ್ತಿಯನ್ನು ಅನುಸರಿಸುವುದಕ್ಕಾಗಿ ವಿಧಿನಿರ್ದಿಷ್ಟವಾದುದು ಇದನ್ನು ಪರಿಪಾಲಿಸುತ್ತಾ ಶ್ರದ್ಧೆಯಿಂದ ವೃದ್ಧರಾದ ತಾಯಿ ತಂದೆಗಳನ್ನು ಶುಶ್ರೂಷೆ ಮಾಡುತ್ತಿದ್ದೇನೆ. ಸತ್ಯ

---

# "ಪ್ರಯೋಗ ಪರಿಣತ ಮತಿಗಳ್"

" ಇದಾನಳಿವೋನ್ ಏಳನೆಯಾ ನರಕದಾ ಪುಳು ಅಕ್ಕುಂ "
ಎಂದು ಬರೆದ ಶಾಸನವನ್ನೆ ಕಿತ್ತುತಂದು
ಉತ್ತಮ ಕಲ್ಲುಚಪ್ಪಡಿ! ನಯವಾಗಲಿ ಎಂದು
ಅದರಲ್ಲಿರುವ ಶಾಸನದ ಕಂಡರಣೆಯ
ಮಾತುಗಳನ್ನೆ ಸೀಂಟಿ ಕಳೆದು
ಮೆಟ್ಟುಗಲ್ಲಿಗೋ ಬಟ್ಟೆ ಒಗೆಯುವುದಕ್ಕಾಗಿಯೋ
ಪುಳಿಯೋಗರೆ ಕಲಸುವುದಕ್ಕಾಗಿಯೋ
ಬಳಸಿದ ನಮ್ಮ ಕುರಿತೋದದವರನ್ನು
ಏನೆಂದು ಕರೆಯಬೇಕೋ? ನೋಡಬೇಕಷ್ಟೆ!

**ಕೆ. ಸುಬ್ರಹ್ಮಣ್ಯಭಟ್ಟ ಎಂ. ಎ**

ವನ್ನೇ ಹೇಳುತ್ತೇನೆ. ಪರಿಹಾಸಕ್ಕೂ ಸುಳ್ಳು ಹೇಳುವುದಿಲ್ಲ. ಯಾರ ವಿಷಯದಲ್ಲಿಯೂ ಅಸೂಯೆ ಪಡುವುದಿಲ್ಲ. ಯಥಾಶಕ್ತಿ ದಾನಮಾಡುತ್ತೇನೆ. ದೇವತಾತಿಥಿಗಳನ್ನು ಪೂಜಿಸುತ್ತೇನೆ ಅಪರಾಧಿಯಾದವನ ಅಪರಾಧವನ್ನು ಎತ್ತಿ ಹೇಳಿ ಅವನನ್ನು ಅವಹೇಳನ ಮಾಡುವುದಿಲ್ಲ ಯಾರ ಮೇಲೆಯೂ ದೋಷಾರೋಪಣೆ ಮಾಡುವುದಿಲ್ಲ. ಸ್ವವೃತ್ತಿಯಲ್ಲಿದ್ದರೂ ಸನ್ಮಾರ್ಗದಲ್ಲಿರುವವನಿಗೆ ಯಾವ ಭಯವೂ ಇಲ್ಲ. ನನ್ನ ವಿಷಯದಲ್ಲಿ ಹೇಳುವುದಾದರೆ ನಾನು ಜಾತಿಯಲ್ಲಿ ವ್ಯಾಧನಾದರೂ ಮಾಂಸವನ್ನು ಮಾರಿ ಜೀವಿಸುತ್ತಿದ್ದರೂ ಆ ಪ್ರಾಣಿಗಳನ್ನು ನಾನು ಮಾರುತ್ತೇನೆ; ಆದರೆ ನಾನು ಕೊಲ್ಲುವುದಿಲ್ಲ ಇತರರು ಕೊಂದ ಪ್ರಾಣಿಗಳ ಮಾಂಸವನ್ನು ನಾನು ಮಾರುತ್ತೇನೆ ಆದರೆ ನಾನು ಮಾಂಸಭಕ್ಷಕನಲ್ಲ ಹಗಲಿನಲ್ಲಿ ಉಪವಾಸವಿದ್ದು ರಾತ್ರಿಯಲ್ಲಿ ಮಾತ್ರ ಊಟಮಾಡುತ್ತೇನೆ ನನ್ನ ವೃತ್ತಿಯು ಕ್ರೌರ್ಯವಾಗಿದ್ದರೂ ನಾನು ಕ್ರೌರ್ಯದಿಂದಲೇ ಜೀವಿಸಬೇಕೆಂಬ ನಿಯಮವಿಲ್ಲ ಕ್ರೌರ್ಯವೃತ್ತಿಯಲ್ಲಿದ್ದೂ ಸಾಧು ಜೀವನವನ್ನು ನಡೆಸಬಹುದೆಂಬುದು ನನಗೆ ಅನುಭವವಾಗಿದೆ ದುಶ್ಶೀಲನಾದವನೂ ಪರಮಪುರುಷನ ಸದ್ವಿಕಧ್ಯಾನದಿಂದ ಸುಶೀಲನಾಗಬಹುದು. ಪ್ರಾಣಿಹಿಂಸಕನಾದರೂ ಧಾರ್ಮಿಕನಾಗಿರಬಹುದು ಆದರೆ ರಾಜನಾದವನು ಅಧರ್ಮಿಯಾದರೆ ಪ್ರಜೆಗಳು ಧರ್ಮಿಷ್ಠರಾಗಲು ಸಾಧ್ಯವಾಗುವುದಿಲ್ಲ. ನಾನು ನನ್ನನ್ನು ನಿಂದಿಸುವವರನ್ನೂ ಶ್ಲಾಘಿಸುವವರನ್ನೂ ಏಕರೀತಿಯಲ್ಲಿ ಕಾಣುತ್ತೇನೆ ಸಾಧು ಸತ್ಪುರುಷರಿಗುಚಿತವಾದ ಮಾರ್ಗದಲ್ಲಿ ಸತ್ಕರಿಸುತ್ತೇನೆ ಯಥಾಶಕ್ತಿ ಅನ್ನದಾನಮಾಡುವುದು, ಸಹನೆಯಿಂದಿರುವುದು, ಧರ್ಮದಲ್ಲಿ ನಿಷ್ಠನಾಗಿರುವುದು ಸರ್ವಪ್ರಾಣಿಗಳಲ್ಲಿಯೂ ದಯೆಯಿಂದಿರುವುದು, ಎಲ್ಲರನ್ನೂ ಯಥಾಶಕ್ತಿ ಸತ್ಕರಿಸುವುದು, ಇವೆಲ್ಲ ತ್ಯಾಗಶೀಲರಲ್ಲಿ ಮಾತ್ರ ಸಾಧ್ಯ. ಶ್ರೇಯಃಕಾಮಿಯಾದವನು ಸುಳ್ಳು ಹೇಳಬಾರದು ಅಪ್ರಾರ್ಥಿತವಾಗಿ ಪ್ರಿಯವನ್ನುಂಟು ಮಾಡಬೇಕು. ಕಷ್ಟದಲ್ಲಿರುವವರಿಗೆ ಅಯಾಚಿತವಾಗಿ ಉಪಕಾರ ಮಾಡಬೇಕು ಭಯ, ದ್ವೇಷ, ಕಾಮಾದಿ ಕಾರಣಗಳಿಂದ ಧರ್ಮವನ್ನು ಮಾಡಬಾರದು. ಪ್ರಿಯವಾದಾಗ ಹಿಗ್ಗಲೂಬಾರದು ಅಪ್ರಿಯವಾದಾಗ ತಗ್ಗಲೂಬಾರದು. ಐಶ್ವರ್ಯವಂತನಾದವನಿಗೆ ಹಣದ ಮುಗ್ಗಟ್ಟು ಬರಬಹುದು. ಆಗ ಭ್ರಾಂತನಾಗಿ ಧರ್ಮಭ್ರಷ್ಟನಾಗಬಾರದು. ಒಂದು ಕಾರ್ಯವು ದೋಷವೆಂದು ತಿಳಿದ ಮೇಲೂ ಅದನ್ನು ಪುನಃ ಮಾಡ ಬಾರದು. ಧರ್ಮಮಾರ್ಗದಲ್ಲಿ ಪುರುಷಾರ್ಥ ಸಿದ್ಧಿಯಾಗುವ ಮಾರ್ಗವನ್ನು ಮಾತ್ರ ಅಂಗೀಕರಿಸಬೇಕು. ದ್ರೋಹವನ್ನೆಸಗಿದವನಿಗೆ ಪ್ರತಿದ್ರೋಹ ಮಾಡಬಾರದು. ರಾಗದ್ವೇಷಗಳಿಗೆ ಮನಸೋತು ಸನ್ಮಾರ್ಗವನ್ನು ತೊರೆಯಬಾರದು ಸಾಧುಸಂತರನ್ನು ಅವಹೇಳನ ಮಾಡಬಾರದು. ಕರ್ಮಕ್ಕೆ ತಕ್ಕಫಲ ಬಂದೇ ಬರುತ್ತದೆ. ನಾವು ಮಾಡಿದ್ದೇ ಸರಿ ಎಂದು ವಾದಿಸಬಾರದು. ಆತ್ಮಪ್ರಶಂಸೆಯು ನಿಂದ್ಯವಾದುದು. ಪರನಿಂದೆಯೂ ಅಷ್ಟೇ ಪಾಪಕರ ಪಶ್ಚಾತ್ತಾಪದಿಂದ ಪಾಪಪರಿಹಾರವಾಗುತ್ತದೆ. ಅಜ್ಞಾನದಿಂದ ಮಾಡಿದ ಪಾಪವನ್ನು ಧರ್ಮಮಾರ್ಗಾನುಸರಣೆಯಿಂದ ಸರಿಪಡಿಸಿಕೊಳ್ಳಬಹುದು ಧಾರ್ಮಿಕ ಪ್ರಮಾದದಿಂದ ಮಾಡಿದ ಪಾಪವನ್ನು ಧರ್ಮವೇ ನಿರಸನ ಮಾಡುತ್ತದೆ. ಆದರೆ ಮಾಡಿದ ಪಾಪವನ್ನು ಸರ್ವಥಾ ಮುಚ್ಚಿಡಬಾರದು. ಯಾವಾಗಲೂ ಒಳ್ಳೆಯ ಕಾರ್ಯವನ್ನು ಶ್ರದ್ಧೆಯಿಂದ ಮಾಡಬೇಕು ದುರಾಶೆಯೇ ಎಲ್ಲ ಪಾಪಗಳಿಗೂ ಕಾರಣ, ಕೃಪಣನಾದವನೂ ಸರ್ವಥಾ ಪಾಪ ಮಾಡುತ್ತಾನೆ ಇಂತಹ ಲೋಭಿಗಳು ತೋರಿಕೆಗೆ ಧಾರ್ಮಿಕರಂತೆ ನಟಿಸಿ ಆಡುವ ಮಾತುಗಳು ಶ್ರುತಿ – ಸ್ಮೃತಿ



ಗಳಿಗೆ ಸಮ್ಮತವಾಗಿಯೇ ಇರುತ್ತದೆ ಆದರೆ ಅವರಲ್ಲಿ ಶಿಷ್ಟಾಚಾರವು ಮಾತ್ರ ಇರುವುದಿಲ್ಲ."

ಆಗ ಕೌಶಿಕನು ವ್ಯಾಧನನ್ನು ಕುರಿತು "ಮಹಾನುಭಾವ ಶಿಷ್ಟಾಚಾರವು ಯಾವುದು ಅದಲ್ಲದುದು ಯಾವುದು ಎಂಬುದನ್ನು ದಯವಿಟ್ಟು ತಿಳಿಸು" ಎಂದು ಕೇಳಿದನು ವ್ಯಾಧನು ಈ ರೀತಿ ಉತ್ತರಿಸಿದನು.

ಸರ್ವಭೂತದಯಾವಂತೋ ಅಹಿಂಸಾ
ನಿರತಸ್ಸದಾ
ಪರುಷಂಚ ನಭಾಷಂತೇ ಸದಾಸಂತೋ
ದ್ವಿಜಪ್ರಿಯಾಃ।
ಶುಭಾನಾಮಶುಭಾನಾಂಚ ಕರ್ಮಕಾಂ
ಫಲಸಂಚಯೇ
ವಿಪಾಕಮಭಿಜಾನಂತಿ ತೇ ಶಿಷ್ಟಾಃ ಶಿಷ್ಟ
ಸಮ್ಮತಾಃ ॥

ಸರ್ವಪ್ರಾಣಿಗಳಲ್ಲಿಯೂ ದಯಾವಂತರೂ, ಅಹಿಂಸಾನಿರತರಾಗಿರುವವರೂ, ಬ್ರಾಹ್ಮಣರಿಗೆ ಪ್ರಿಯರಾಗಿರುವವರೂ, ಶುಭಾಶುಭ ಫಲಗಳ ಪರಿಣಾಮವಾಗಿ ಉಂಟಾದ ಪುಣ್ಯ ಪಾಪಗಳನ್ನು ಅನುಭವಿಸುವುದರಲ್ಲಿ ಏಕಮನಸ್ಕ (ಸಮಚಿತ್ತ) ರಾಗಿರುವವರು ಶಿಷ್ಟರೆನಿಸಿಕೊಳ್ಳುತ್ತಾರೆ

ನ್ಯಾಯೋಪೇತಾಃ ಗುಣೋಪೇತಾಃ
ಸರ್ವಲೋಕ ಹಿತೈಷಿಣಃ
ಸಂತ! ಸ್ವರ್ಗಜಿತಃ! ಶುಕ್ಲಾ! ಸನ್ನಿವಿಷ್ಟಾಶ್ಚ
ಸತ್ಪಥೇ।
ದಾತಾರ ಸಂವಿಭಕ್ತಾರೋ ದೀನಾನುಗ್ರಹ
ಕಾರಿಣಃ
ಸರ್ವಪೂಜ್ಯಾಃ ಶ್ರುತಿಧನಾಸ್ತಥೈವ ಚ
ತಪಸ್ವಿನಃ
ಸರ್ವಭೂತ ದಯಾವಂತಸ್ತೇ ಶಿಷ್ಟಾಃ
ಸಮ್ಮತಾಃ

ಅವರು ಯಾವಾಗಲೂ ನ್ಯಾಯಸಮ್ಮತರಾಗಿರುತ್ತಾರೆ, ಶಮದಮಾದಿಗುಣಗಳಿಂದ ಕೂಡಿರುತ್ತಾರೆ, ಸಕಲ ಜನರ ಹಿತದಲ್ಲಿ ಆಸಕ್ತರಾಗಿರುತ್ತಾರೆ. ತಮ್ಮ ಕಾರ್ಯಗಳಿಂದ ಸ್ವರ್ಗವನ್ನು ಜಯಿಸುತ್ತಾರೆ. ಹಿಂಸಾಶೂನ್ಯವಾದ ಧರ್ಮವನ್ನೇ ಆಚರಿಸುತ್ತಾರೆ, ಸತ್ಪುರುಷರಿಗೆ ಮಾರ್ಗದರ್ಶಕರಾಗುತ್ತಾರೆ, ದಾನಶೀಲರಾಗಿರುತ್ತಾರೆ, ಸರ್ವಸಮತಾಭಾವವನ್ನುಳ್ಳವರಾಗಿರುತ್ತಾರೆ, ದೀನಾವಲಂಬಿಗಳೂ ವಿದ್ಯಾಧನರೂ ತಪಸ್ವಿಗಳೂ ಆಗಿರುತ್ತಾರೆ.

ಅಹಿಂಸಾಸತ್ಯವಚನಮನೃಶಂಸ್ಯ
ಮದಾರ್ಜವಂ
ಅದ್ರೋಹೋನಾಭಿಮಾನಶ್ಚ ಹ್ರೀಸ್ತಿತಿಕ್ಷಾ
ದಮಃಶಮಃ
ಧೀಮಂತೋ ಧೃತಿಮಂತಶ್ಚ ಭೂತಾನಾ
ಮನುಕಂಪಕಾಃ
ಅಕಾಮದ್ವೇಷ ಸಂಯುಕ್ತಾಃ ತೇ ಸಂತೋ
ಲೋಕಸಾಕ್ಷಿಣಃ ॥

ಅಹಿಂಸೆ, ಸತ್ಯ, ನಿಷ್ಠೆ, ಕರುಣೆ, ನಿಷ್ಕಾಪಟ್ಯ (ಕಪಟವಿಲ್ಲದಿರುವಿಕೆ) ಇತರರಿಗೆ ದ್ರೋಹವೆಣಿಸದಿರುವುದು, ನಿರಭಿಮಾನ, ಪಾಪಕಾರ್ಯಗಳನ್ನು ಮಾಡಲು ನಾಚುವುದು, ಸಹನೆ, ಜಿತೇಂದ್ರಿಯತ್ವ ಮತ್ತು ಶಾಂತತೆ–ಇವು ಶಿಷ್ಟರ ಗುಣಗಳು. ಬುದ್ಧಿವಂತರಾಗಿಯೂ, ಧೃಡಮನಸ್ಕರಾಗಿಯೂ, ಭೂತದಯಾ ಪಶ್ಚಾತ್ತಾಪವುಳ್ಳವರಾಗಿಯೂ, ಕಾಮದ್ವೇಷ ರಹಿತರಾಗಿಯೂ ಇರುವ ಸತ್ಪುರುಷರು ಲೋಕಕ್ಕೆ ಸಾಕ್ಷೀಭೂತರಾಗಿರುತ್ತಾರೆ. ಇಂತಹ ಸತ್ಪುರುಷರ ಶಿಷ್ಟಾಚಾರರ ಸಹವಾಸವು ಸರ್ವದಾ ಪರಮ ಶ್ರೇಷ್ಠವಾದುದು.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ | | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ [illegible] | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು | | | | | |
| ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಪರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಮುಂದೆ ಧರ್ಮವ್ಯಾಧನು ಹಿಂಸೆ ಮತ್ತು ಅಹಿಂಸಾಸ್ವರೂಪಗಳನ್ನು ತಿಳಿಸಿ ಧರ್ಮಮಾರ್ಗದಲ್ಲಿರುವವನಿಗೆ ಯಾವುದೂ ಕ್ರೂರವಾಗುವುದಿಲ್ಲವೆಂದು ತಿಳಿಸುತ್ತಾನೆ ಧರ್ಮದ ಸ್ವರೂಪವು ಏಕರೀತಿಯಲ್ಲಿರುವುದಿಲ್ಲ ಕಾಲ, ದೇಶ, ವರ್ತಮಾನಗಳಿಗೆ ಹೊಂದಿಕೊಳ್ಳತಕ್ಕದ್ದಾಗಿದೆ ಅದನ್ನರಿತು ಕುಲಾಗತ ವೃತ್ತಿಯನ್ನು ಶಿಷ್ಟರ ಮಾರ್ಗದಲ್ಲಿ ಅನುಸರಿಸುವುದು ಶ್ರೇಯಸ್ಕರವೆಂದು ತಿಳಿಸುತ್ತಾನೆ

ಮುಂದೆ ಧರ್ಮವ್ಯಾಧನು ತನಗೆ ಧರ್ಮರಹಸ್ಯವು ಲಭ್ಯವಾಗುವುದಕ್ಕೆ ಕಾರಣವಾದ ಮಾತಾಪಿತೃ ಶುಶ್ರೂಷೆಯ ವೈಭವವನ್ನು ತಿಳಿಯಪಡಿಸುವುದಕ್ಕಾಗಿ ಕೌಶಿಕನನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಅವರಿಗೆ ಕೌಶಿಕನ ಪರಿಚಯ ಮಾಡಿಸುತ್ತಾನೆ ಅವರ ಸಮ್ಮುಖದಲ್ಲಿ ಧರ್ಮಸೂಕ್ಷ್ಮಗಳು ಶುಭಾಶುಭ ಕರ್ಮಗಳು ಮತ್ತು ಅವುಗಳ ಫಲ, ಬ್ರಹ್ಮಪ್ರಾಪ್ತಿಗೆ ಉಪಾಯ ಮತ್ತು ಫಲ, ಆಧ್ಯಾತ್ಮ ಬೋಧೆ, ಪಂಚಭೂತಗಳ ಗುಣವರ್ಣನೆ ಮತ್ತು ಇಂದ್ರಿಯ ನಿಗ್ರಹದ ಫಲ, ಮೂರು ಗುಣಗಳ ಸ್ವರೂಪ ಮತ್ತು ಫಲ, ಪ್ರಾಣವಾಯುವಿನ ಸ್ಥಿತಿ, ಪರಮಾತ್ಮನ ಸಾಕ್ಷಾತ್ಕಾರಕ್ಕೆ ಉಪಾಯ, ಮಾತಾಪಿತೃ ಸೇವೆಯ ಫಲ ಮತ್ತು ವ್ಯಾಧನ ಪುನರ್ಜನ್ಮ ವೃತ್ತಾಂತ ಇವುಗಳನ್ನು ವಿವರವಾಗಿ ತಿಳಿಸುತ್ತಾನೆ. ವ್ಯಾಧನು ತಿಳಿಸಿದ ಮಾತಾಪಿತೃ ಸೇವೆಯ ಫಲಶ್ರವಣದಿಂದ ಕೌಶಿಕನು ತಾನು ನಿರ್ಲಕ್ಷಿಸಿದ ತನ್ನ ಮಾತಾಪಿತೃಗಳ ಸೇವೆಯಲ್ಲಿ ನಿರತನಾಗಲು ಸಂಕಲ್ಪಿಸುವನು. ಧರ್ಮರಹಸ್ಯದ ಸ್ವರೂಪವನ್ನು ಕೂಲಂಕಷವಾಗಿ ತಿಳಿಸಿದುದಕ್ಕಾಗಿ ಕೌಶಿಕನು ವ್ಯಾಧನಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸಿ ತನ್ನ ಮನೆಗೆ ತೆರಳುವನು.

ಭಾರತದಲ್ಲಿ ವರ್ಣಿತವಾಗಿರುವ ಈ ಧರ್ಮಸಂದೇಶವು ಸರ್ವರಿಗೂ ಕಾಲದೇಶಗಳ ನಿರ್ಬಂಧವಿಲ್ಲದೆ ಮಾರ್ಗದರ್ಶಕವಾಗಿರುವುದರಲ್ಲಿ ಸಂದೇಹವಿಲ್ಲ


## ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ

ಸಂಪುಟ ಒಂದು ಹಾಗೂ ಎರಡು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

# ಮೋಹನ ಮುರಳಿ

ಮೃತ್ಯುಭೀತನಾದ ಪರೀಕ್ಷಿನ್ನರೇಂದ್ರ ಗಂಭೀರವಾಗಿ ಕುಳಿತಿದ್ದಾನೆ. ಎದುರಿಗೆ ಅವಧೂತವರೇಣ್ಯ ಶುಕಮಹರ್ಷಿ ಮಂದಸ್ಮಿತನಾಗಿ ಕುಳಿತಿದ್ದಾನೆ. ಅನತಿದೂರದಲ್ಲಿ ತ್ರಿಪಥಗಾಮಿನಿ ಗಂಗೆ ಗಂಭೀರವಾಗಿ ಪ್ರವಹಿಸುತ್ತಿದ್ದಾಳೆ. ಕೃಷ್ಣ ಕಥಾಮೃತವು ತಪ್ತಜೀವಿಯಾದ ಪರೀಕ್ಷಿತನಿಗೆ ಕ್ರಮಕ್ರಮವಾಗಿ ಹೇಗೆ ಸ್ವಾಂತನ ನೀಡುತ್ತಿದೆ ಎಂಬುದನ್ನು ಆ ತಪೋಧನ ಸೂಕ್ಷ್ಮವಾಗಿ ಗಮನಿಸುತ್ತಿದ್ದಾನೆ. ಋಷಿವಾಕ್ಯಗಳನ್ನು ಮಹಾರಾಜ ಮನಸ್ಸಿನಲ್ಲೇ ಜಪ್ಪರಿಸುತ್ತಿದ್ದಾನೆ.

ಪ್ರಸನ್ನವಕ್ತ್ರಂ ನಳಿನಾಯತೇಕ್ಷಣಂ
ಕದಂಬ ಕಿಂಜಲ್ಕ ಪಿಶಂಗವಾಸಸಂ
ಲಸನ್ಮಹಾರತ್ನ ಹಿರಣ್ಮಯಾಂಗದಂ
ಸ್ಫುರನ್ಮಹಾರತ್ನ ಕಿರೀಟಕುಂಡಲಮ್ ||

ಯಾವುದೀ ಕಮನೀಯ ದಿವ್ಯರೂಪ!! ಎಲ್ಲಿದೆ ಈ ಲೋಕ ಮೋಹಕ ಸೌಂದರ್ಯ !!

ಶುಕರು ಹೇಳಿದರು– ಮಹಾರಾಜ, ಈ ಅಲೌಕಿಕ ಲಾವಣ್ಯರಾಶಿ ನಂದಗೋಕುಲದ ಭಾಗ್ಯ, ದೇವಕೀವಸುದೇವರ ಪುಣ್ಯೋದಯ, ವ್ರಜ ಭೂಮಿಯ ತಪಃಫಲ, ಋಷಿಮುನಿಗಳ ಚಿರಸಂಚಿತ ಪುಣ್ಯಪುಂಜ !! ಮುಗ್ಧ ಗೋಪಕನ್ಯೆಯರ ಆರಾಧ್ಯಮೂರ್ತಿಯಾದ ಕೃಷ್ಣನೆಂದರೆ ರೂಪು ಪಡೆದ ಮಾಧುರ್ಯ, ಸಾಕಾರವಾದ ಸೌಂದರ್ಯ, ರಸಿಕ ಚಕ್ರವರ್ತಿಯಾದ ನಂದನಂದನ, ತನ್ನ ಮುಗ್ಧ ಸೌಂದರ್ಯದಿಂದ, ವೇಣುಗಾನ ವೈಖರಿಯಿಂದ, ನೃತ್ಯವೈಭವದಿಂದ, ಅತಿಮಾನುಷ ಲೀಲಾವಿನೋದಗಳಿಂದ, ಭಕ್ತಕಲ್ಪತರುವಾಗಿ, ಭಾಗ್ಯದ ಸುರಧೇನುವಾಗಿ, ಭುವನೈಕಸುಂದರನಾಗಿ, ಜಗದಾರಾಧ್ಯನಾಗಿ ಮೆರೆದಿದ್ದಾನೆ.

"ಪೂಜ್ಯರೇ– ಈ ಭುವನಸುಂದರಾಂಗನ ವಿಷಯ ನನಗೆ ಕೆಲವು ಕಾಲದ ಮುಂಚೆ ತಿಳಿದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ಎಷ್ಟೋ ಆನಂದಪಡುತ್ತಿದ್ದೆ, ಆದರೆ ಈಗ ಸಂತೋಷಪಡುವ ಕಾಲ ಮುಗಿದು ಹೋಗಿದೆ"– ಪರೀಕ್ಷಿತ್ ಗದ್ಗದ ಕಂಠದಿಂದ ಹೇಳಿದ

"ಕಾಲ ಮುಗಿದು ಹೋಗುವುದು ಅಸಂಭವ ಮಹಾರಾಜ, ಅದು ಅನಂತವಾದದ್ದು".

"ಇರಬಹುದು, ಆದರೆ ನನ್ನ ಜೀವನದ ಅವಧಿ ಮುಗಿಯುತ್ತಿದೆ. ಈ ಜಗತ್ತಿನಲ್ಲಿ ನಾನು ಬದುಕಿರುವುದು ಇನ್ನು ಕೇವಲ ಒಂದು ವಾರ ಮಾತ್ರ.'

"ಅದು ನನಗೆ ತಿಳಿದಿದೆ. ಆದ್ದರಿಂದಲೇ ನಾನಿಲ್ಲಿಗೆ ಬಂದಿರುವುದು. ನಿನ್ನ ಭಯ ಕೇವಲ ಕಾಲ್ಪನಿಕವಾದದ್ದು. ಅಭಯ ಹಸ್ತವೊಂದಿದೆ– ಎಂಬ ಸುದೃಢ ನಂಬಿಕೆ ಇಲ್ಲದಾಗ ಭಯವಿರುತ್ತದೆ. ಅದೂ ಅಲ್ಲದೆ– ನೀನು ಅನಂತಶಕ್ತಿಯ, ಅನಂತ ಸೌಂದರ್ಯದ ಅಖಂಡಸತ್ಯದ ಒಂದು ರೂಪವೇ ಆಗಿರುವಾಗ ಜೀವನದವಧಿ ಮುಗಿಯುತ್ತದೆಂದರೆ ಅರ್ಥವೇನು ಮಹಾರಾಜ?"

"ಇದು ಬಿಡಿಸಲಾಗದ ಕಗ್ಗಂಟು. ಇದಕ್ಕೆ ಪರಿಹಾರವಾದರೂ ಏನಿದೆ ಮಹರ್ಷಿ?"

"ಪರಬ್ರಹ್ಮ ವಸ್ತುವಿನ ಚಿನ್ತನ, ಭಗವಂತನ ವಿವಿಧ ಲೀಲಾವಿನೋದಗಳ ಮನನ –ಇದೇ ಪರಿಹಾರ. 'ಕೇಶವಃ ಕ್ಲೇಶನಾಶಕಃ' ಎಂದಿದ್ದಾರೆ ಹಿರಿಯರು. 'ಹರಿರ್ಹಿ ಸಾಧ್ಯತೇ ಭಕ್ತ್ಯಾ ಪ್ರಮಾಣಂ ತತ್ರ ಗೋಪಿಕಾಃ'

"ಯಾರಾ ಗೋಪಿಕೆಯರು? ಅವರು ಭಕ್ತಿಯಿಂದ ಸಾಧಿಸಿಕೊಂಡದ್ದಾದರೂ ಏನು?"

"ಅದೊಂದು ದೊಡ್ಡ ಕಥೆ, ಆಗ ನೀನಿನ್ನೂ ಹುಟ್ಟೇ ಇರಲಿಲ್ಲ. ನಿನ್ನ ಪೂರ್ವ



ಶ್ರೀ ಬ. ನ. ಗುಂಡೂರಾವ್

ಜರಾದ ಪಾಂಡವರು ದ್ಯೂತದಲ್ಲಿ ಏನನ್ನೂ ಕಳೆದುಕೊಂಡಿರಲಿಲ್ಲ. ಆಗಿನ್ನೂ ಶಕುನಿಯ ದುಷ್ಟ ಸಲಹೆಗಳು ಪ್ರಾರಂಭವಾಗಿರಲಿಲ್ಲ. ಕುರುಕ್ಷೇತ್ರ ರಣರಂಗದಲ್ಲಿ ನಿಮ್ಮವರೂ, ಕೌರವರೂ ಯುದ್ಧ ಸನ್ನದ್ಧರಾಗಿ ನಿಂತಿರಲಿಲ್ಲ. ಕೃಷ್ಣನ ಕೈಗೆ ನಿಮ್ಮ ತಾತನ ರಥದ ವಾಘೆಗಳಾಗಲೀ, ಸುದರ್ಶನ ಚಕ್ರವಾಗಲೀ, ಪಾಂಚಜನ್ಯ ಶಂಖವಾಗಲೀ ಬಂದಿರಲಿಲ್ಲ. ಆ ಕಾಲದಲ್ಲಿ ಕೃಷ್ಣ ತನ್ನ ಬಾಲ್ಯವನ್ನು ಕಳೆದದ್ದು ಯಮುನಾತರಂಗಿಣಿಯ ಬಳಿಯ ಗೋಕುಲ ಬೃಂದಾವನಗಳಲ್ಲಿ, ಧೇನುವೃಂದಗಳಲ್ಲಿ, ಆದ್ದರಿಂದಲೇ ಆತನನ್ನು;

ಗೋ ಗೋಪ ಗೋಪಿ ಜನಮಧ್ಯ
ಸಂಸ್ಥಂ
ಗೋಪಂ ಭಜೇ ಗೋಕುಲ ಪೂರ್ಣ
ಚಂದ್ರಮ್

ಎಂದು ಸ್ತುತಿಸಲಾಗಿದೆ. ನಿನ್ನ ಪೂರ್ವಜರಾದ ಪಾಂಡವರನ್ನು ಹೆಜ್ಜೆ ಹೆಜ್ಜೆಗೂ ಕಾಪಾಡಿದ ಕೃಷ್ಣನ ಸಂಪೂರ್ಣ ಕೃಪಾಪಾತ್ರರಾದವರು ಗೋಪಿಕೆಯರು. ಅದಕ್ಕಾಗಿ ಅವರು ಕೊಟ್ಟದ್ದು ಭಕ್ತಿ".

ಶುಕರು ಗಂಭೀರವಾಗಿ ನುಡಿದರು.

"ಮಹರ್ಷಿಗಳೇ – ತಸ್ಯೋಪದೇಷ್ಟಾ ಪುರುಷಃ ಪ್ರಾಯೋ ಭಾಗ್ಯೇನ ಲಭ್ಯತೇ– ಎನ್ನುತ್ತಾರೆ. ಅದನ್ನು ತಿಳಿಸುವ ವ್ಯಕ್ತಿ ಪೂರ್ವಪುಣ್ಯದಿಂದ ಸಿಕ್ಕುತ್ತಾರಂತೆ. ತಾವು ನನಗೆ ದೊರತದ್ದು ಪೂರ್ವಪುಣ್ಯ ವಿಶೇಷವೆಂದು ಭಾವಿಸಿದ್ದೇನೆ ಆ ಗೋಕುಲಪೂರ್ಣ ಚಂದ್ರನ ದಿವ್ಯವೃತ್ತಾಂತವನ್ನು ತಿಳಿಸುವ ಕೃಪೆ ಮಾಡೋಣವಾಗಬೇಕು"–

ಪರೀಕ್ಷಿತ ಅನುನಯದ ಧ್ವನಿಯಲ್ಲಿ ಬಿನ್ನವಿಸಿದ.

"ಕೋಟಿ ಮನ್ಮಥಲಾವಣ್ಯನೂ, ವನಮಾಲಿಯೂ, ಘನಶ್ಯಾಮನೂ ಆದ ಶ್ರೀ ಕೃಷ್ಣನ ವಿಚಾರವನ್ನು ಕೇಳಿ ಕೇಳಿ ನೀನೂ ಧನ್ಯನಾಗುವೆ. ಹೇಳಿ ಹೇಳಿ ನಾನೂ ಧನ್ಯನಾಗುತ್ತೇನೆ ಮಹಾರಾಜ."

ಶುಕರ ವಾಗಮೃತಧಾರೆ ಪ್ರಸನ್ನ ಗಂಭೀರ ಮಂಗಳ ಮಂದಾಕಿನಿಯಂತೆ ನಿರರ್ಗಳವಾಗಿ ಪ್ರವಹಿಸಲಾರಂಭಿಸಿತು.

ತಂ ಗೋರಜ ಸ್ಫುರಿತ ಕುಂತಲ ಬದ್ಧ
ಬರ್ಹ
ವನ್ಯಪ್ರಸೂನ ರುಚಿರೇಕ್ಷಣ ಚಾರು
ಹಾಸಂ
ವೇಣುಂ ಕ್ವಣಂತಮನುಗೈರನುಗೀತ
ಕೀರ್ತಿಂ
ಗೋಪ್ಯೋ ದಿದೃಕ್ಷಿತದೃಶೋ ಅಭ್ಯ
ಗಮನ್ ಸಮೇತಾಃ

ಒಂದುದಿನ ಸಂಜೆ ಕೃಷ್ಣ ಗೋಪಸಮೂಹದೊಡನೆ ಊರಿನತ್ತ ಬರುತ್ತಿದ್ದಾನೆ ತನ್ನ ಜತೆಗಾರರ ಸಮೇತ. ಆತನ ಮುದ್ದುಮುಖದ ಮೇಲೆ ಗೋಧೂಳಿ ಅಲಂಕೃತವಾಗಿದೆ. ಕಾಡಿನ ನಾನಾಬಗೆಯ ಪುಷ್ಪಗಳಿಂದ ಶೃಂಗಾರ ಮಾಡಿಕೊಂಡಿದ್ದಾನೆ. ಮಂದಹಾಸ ಸುಂದರ ವದನಾರವಿಂದನಾದ ಕೃಷ್ಣ ವೇಣುನಾದ ಮಾಡುತ್ತ ಬರುತ್ತಿದ್ದಾನೆ. ಆ ಕಮನೀಯ ಮೂರ್ತಿಯನ್ನು ನೋಡಿ ಧನ್ಯರಾಗುವ ಸಲುವಾಗಿ ಗೋಪ ಕನ್ಯೆಯರು ಗುಂಪು ಗುಂಪಾಗಿ ಬರುತ್ತಿದ್ದಾರೆ. ಅಷ್ಟರಲ್ಲಿ ಓಡೋಡಿ ಬಂದ ಯಶೋದೆ ಆ ಪುಣ್ಯಮೂರ್ತಿಯನ್ನೆತ್ತಿಕೊಂಡು ಮುದ್ದಾಡುತ್ತಾಳೆ. ಇದೆಲ್ಲ ನಂದಗೋಕುಲದ ಭಾಗ್ಯ. ಕೃಷ್ಣನ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

**ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ**

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | | ಬೆಳಗ್ಗೆ 5–00 ರಿಂದ 5–30 |
| ಸರ್ವದರ್ಶನ | ಬೆಳಗ್ಗೆ 4–00 ರಿಂದ 4–30 | |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 7–30 ರಿಂದ 9–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 9–00 ರಿಂದ 10–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 10–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ 8–00 ರಿರಿದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

# ಹರಿದಾಸರು ಕಂಡ ರಾಘವೇಂದ್ರರು

ಕರ್ನಾಟಕ ಹರಿದಾಸರು ವಿನಾಯಕನಿಂದ ಆರಂಭಿಸಿ ಶ್ರೀಹರಿಯವರೆಗೆ ಎಲ್ಲ ದೇವತೆಗಳನ್ನು ಸ್ತುತಿಸಿರುವರು. ದೇವತಾಸ್ತುತಿಪರಗಳಾದ ಹರಿದಾಸರ ಕೃತಿಗಳಲ್ಲಿ ಶ್ರೀನಿವಾಸ, ಕೃಷ್ಣ ಹಾಗೂ ಹನುಮಂತ ಇವರಿಗೆ ಸಂಬಂಧಿಸಿದ ಕೃತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುವು ವಿಜಯದಾಸರಿಂದ ಪ್ರಾರಂಭಿಸಿ ಈ ಹರಿದಾಸರ ದೇವತಾ ಸ್ತೋತ್ರರೂಪ ಸಾಹಿತ್ಯದಲ್ಲಿ ಮೇಲ್ಕಂಡ ದೇವತೆಗಳಂತೆ ನಾಲ್ಕನೆಯ ಸ್ಥಾನವನ್ನುಗಳಿಸಿದ ದೇವತಾ ಮೂರ್ತಿ ಶ್ರೀ ರಾ ಘ ವೇಂ ದ್ರ ತೀ ರ್ಥ ರು. ರಾಘವೇಂದ್ರತೀರ್ಥರ ಜೀವನ ಹಾಗೂ ಇವರ ಹಿಂದಿನ ಅವತಾರಗಳು ಹರಿದಾಸರ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ಸೇರಿವೆ ಗುರುಸಾರ್ವಭೌಮರ ಜೀವನ ಪ್ರಕೃತ ಸಮಾಜಕ್ಕೆ ಯಾವ ವಿಧದಲ್ಲಿ ಆದರ್ಶಪ್ರಾಯವಾಗಿದೆ, ಅವರಲ್ಲಿ ಮಾನವನ ಬೇಡಿಕೆ ಯಾವುದಾಗಿರಬೇಕು, ಈ ಎಲ್ಲವನ್ನೂ ಹರಿದಾಸರು ತಮ್ಮ ಕೃತಿಗಳಲ್ಲಿ ಸ್ಪಷ್ಟಪಡಿಸಿರುವರು

ಕೃತಯುಗದಲ್ಲಿ ಭಾಗವತ ಧರ್ಮವನ್ನು ಬಿತ್ತರಿಸಿದ ಪ್ರಹ್ಲಾದನೇ ಪುನಃ ಶ್ರೀಹರಿಯ ಆದೇಶದಂತೆ ಲೋಕದ ಉದ್ಧಾರಕ್ಕಾಗಿ, ಧರ್ಮದ ಪುನಃ ಪ್ರತಿಷ್ಠಾಪನೆಗಾಗಿ ಕಲಿಯುಗದಲ್ಲಿ ವ್ಯಾಸತೀರ್ಥರಾಗಿಯೂ ನಂತರ ರಾಘವೇಂದ್ರ ತೀರ್ಥರಾಗಿಯೂ ಅವತರಿಸಿದನೆಂಬುದು ಹರಿದಾಸರ ಕೃತಿಗಳಿಂದ ಸ್ಪಷ್ಟವಾಗುವುದು

ಭಾಗವತದ ಸಪ್ತಮ ಸ್ಕಂಧದ ನಾಯಕ ಪ್ರಹ್ಲಾದ. ಬಾಲ್ಯದಲ್ಲಿಯೇ ದೈತ್ಯಬಾಲಕರನ್ನು ಉದ್ಧರಿಸಿದ ಭಾಗವತೋತ್ತಮನು ಇವನು. "ಕೌಮಾರೇ ಆಚರೇತ್ಪ್ರಾಜ್ಞಃ ಧರ್ಮಾನ್ ಭಾಗವತಾನಿಹ" ಎಂದು ಲೋಕಕ್ಕೆ ಸಂದೇಶ ನೀಡಿದ ವೈರಾಗ್ಯಮೂರ್ತಿ ಪ್ರಹ್ಲಾದ

ಈ ಪ್ರಹ್ಲಾದನ ಎರಡನೇ ಅವತಾರವೆನಿಸಿದ ವ್ಯಾಸತೀರ್ಥರ ಜೀವನವೂ ಸಹ ವೈರಾಗ್ಯಕ್ಕೆ ಕೈಗನ್ನಡಿಯಾಗಿದೆ. ಬಾಲ್ಯದಲ್ಲಿಯೇ ಸನ್ಯಾಸಾಶ್ರಮದಲ್ಲಿ ಕಾಲಿಟ್ಟವರಿವರು. ಗುರುಗಳಾದ ಶ್ರೀಪಾದರಾಜರ ಆದೇಶದಂತೆ ಹಾಗೂ ಸಾಳುವ ನರಸಿಂಹನ ಪ್ರಾರ್ಥನೆಯಂತೆ 12 ವರ್ಷಗಳ ಕಾಲ ತಿರುಮಲೆಯಲ್ಲಿದ್ದು ಶ್ರೀನಿವಾಸನ ಪೂಜಾದಿಗಳನ್ನು ಮಾಡಿ, ಪುನಃ ಅರ್ಚಕ ಮನೆತನದವರಿಗೆ ಶ್ರೀನಿವಾಸನ ಪೂಜಾಸೌಭಾಗ್ಯವನ್ನು ಬಿಟ್ಟುಕೊಟ್ಟವರು. ಕೃಷ್ಣದೇವರಾಯನ ಕುಹುಯೋಗವನ್ನು ಪರಿಹರಿಸುವುದಕ್ಕಾಗಿ ಸಿಂಹಾಸನವನ್ನೇರಿ, ಪುನಃ ರಾಜ್ಯಭಾರವನ್ನು ರಾಜನಿಗೊಪ್ಪಿಸಿದ ಅನಾಸಕ್ತರು ಇವರು

ಈ ವ್ಯಾಸತೀರ್ಥರೇ ಮುಂದೆ ರಾಘವೇಂದ್ರ ತೀರ್ಥರಾಗಿ ಅವತರಿಸಿದರು. ರಾಘವೇಂದ್ರ ತೀರ್ಥರ ಜೀವನದ ಉದ್ದಕ್ಕೂ ಜ್ಞಾನ-ಭಕ್ತಿ-ವೈರಾಗ್ಯಗಳು ಎದ್ದು ತೋರುತ್ತವೆ.

ರಾಘವೇಂದ್ರತೀರ್ಥರ ಈ ಮೂರು ಅವತಾರಗಳ ಹಿರಿಮೆಯನ್ನು ಹರಿದಾಸರು ಮನಸಾರ ಹಾಡಿ ಹೊಗಳಿದ್ದಾರೆ ವಿಜಯದಾಸರು ತಮ್ಮ ಒಂದು ಕೃತಿಯಲ್ಲಿ;

"ನಮೋ ನಮೋ ಯತಿರಾಜ
ಮಮತೆ ರಚಿತ ಅನುಪಮ ಚರಿತ-
ಚಾರುಹಾಸನೆನಿಪ ನಿನ್ನ ।
ಹೆಮ್ಮೆಯಿಂದಲಿಪ್ಪ ಪರಬೊಮ್ಮ ವಿಜಯ
ವಿರಲನಾ-
ತುಮದೊಳರ್ಚಿಪ ಜ್ಞಾನೋ- ॥
ತ್ತಮ ತುಂಗಭದ್ರವಾಸ.

ಎಂದು ಹೇಳಿದರೆ, ಗೋಪಾಲದಾಸರು.—

"ಪ್ರಥಮ ಪ್ರಹ್ಲಾದ ವ್ಯಾಸಮುನಿಯೆ
ಯತಿರಾಘವೇಂದ್ರ ।
ಪತಿತರನುದ ರಿಪ ಪಾವನಕಾರಿಯೆ
ಕೈಮುಗಿವೆನು ದೊರೆಯೆ
ಕ್ಷಿತಿಯೊಳು ಗೋಪಾಲವಿಠಲನ ನೆನೆಯುತ ವರ
ಮಂತ್ರಾಲಯದೊಳು ಶುಭವೀಯುತ" ॥

ಎಂದು ಹಾಡಿದ್ದಾರೆ. ಗುರುಜಗನ್ನಾಥದಾಸರು ಸಹ;

"ನೋಡಿದೆ ಗುರುರಾಯರನ್ನ ಈ- ।
ರೂಢಿಯೊಳಗೆ ಮೆರೆವೊ ಸಾರ್ವಭೌಮನ್ನ ॥
ದಿನನಾಥ ದೀಪ್ತಿ ಭಾಸಕನ ಭವ-
ವನಧಿ ಸಂತರಣ ಸುಪೋತ ಕೋಪಮನ ।

**ಶ್ರೀ ಕೆ. ಅಪ್ಪಣ್ಣಾಚಾರ್ಯ**



ಕೌತಾಳದ ಶ್ರೀ ರಾಘವೇಂದ್ರಸ್ವಾಮಿ

ಮುನಿಜನ ಕುಲದಿ ಶೋಭಿಪನ ಸ್ವೀಯ-
ಜನರ ಪಾಲಕ ಮಹರಾಯನೆನಿಪನ ॥"

ಎಂದು ವರ್ಣಿಸಿ ಗುರುರಾಯರ ಅವತಾರಗಳ ಜೀವನದ ನಿಜತತ್ತ್ವವನ್ನು ತಿಳಿಯ ಹೇಳಿರುವರು

ಇಂತು ಹರಿದಾಸರು ಚಿತ್ರಿಸಿದಂತೆ ಎಲ್ಲ ಅವತಾರಗಳಲ್ಲೂ ಜ್ಞಾನ – ಭಕ್ತಿ – ವೈರಾಗ್ಯ ಭಾಗ್ಯಶಾಲಿಗಳಾದ ಗುರುಸಾರ್ವಭೌಮರು ತಮ್ಮನ್ನೇ ನಂಬಿ ಆರಾಧಿಸುವ ಜನರಿಗೆ ಪರತತ್ತ್ವದ ಗುರಿಯನ್ನೇ ತೋರಿಕೊಡುವರು. ರಸಿಕನು ರಾಗವನ್ನೂ, ರಾಜನು ಕ್ಷಾತ್ರವನ್ನೂ, ಸನ್ಯಾಸಿಯು ವೈರಾಗ್ಯವನ್ನು ಬೋಧಿಸುವರು; ಇದು ಲೋಕ ಸಹಜ

ಜಗನ್ನಾಥದಾಸಾರ್ಯರು :-
"ಕರುಣೆಗಳೊಳಗೆಣೆಗಾಣೆನೊ ನಿನಗೆ ಸ-
ದ್ಗುರುವರ ರಾಘವೇಂದ್ರ

ರಾಘವೇಂದ್ರ ಗುರು ನೀ ಗತಿ ಎಂದನು–
ರಾಗದಿ ಭಜಿಸುತಿಪ್ಪ
ಭಾಗವತರ ದುರಿತೌಘಗಳಳಿಸಿ ಚ–
ನ್ನಾಗಿ ಸಂತೈಸುವಿ ನೀ ಸನ್ಮಾನಿ ॥”

ಎಂದು ಹೇಳಿ ಮೇಲ್ಕಂಡ ವಿಷಯವನ್ನೇ ಸ್ಪಷ್ಟಪಡಿಸಿರುವರು. ಗುರುರಾಜರು ತಮ್ಮನ್ನಾಶ್ರಯಿಸಿದ ವ್ಯಕ್ತಿಯ ಸಕಲ ದುಃಖಗಳನ್ನು ಪರಿಹರಿಸಿ ಅವನಿಗೆ ಇಹಸುಖವನ್ನು ಕರುಣಿಸುವರು ಆದರೆ ಗುರುರಾಜರು ಕರುಣಿಸಿದ ಇಹದ ಸುಖ ಸಂಸಾರ ಬಂಧಕವಾಗದೆ ತಾರಕವಾಗುವುದು, ಭಗವತ್ಪ್ರಾಪ್ತಿಗೆ ಕೈದೀವಟಿಗೆಯಾಗುವುದು 'ಭಾಗವತರ ದುರಿತೌಘಗಳಳಿಸಿ' ಎಂಬ ದಾಸರ ವಚನ ಬಹ್ವರ್ಥಗರ್ಭಿತವಾದುದು

ಭಾಗವತರಿಗೆ ಸಾಂಸಾರಿಕ ದುಃಖಗಳು ದುರಿತಗಳೆನಿಸಲಾರವು. ಭಗವಂತನಿಂದ ದೂರವಿರುವುದೇ ಅವರಿಗೆ ನಿಜವಾದ ದುರಿತ. ದಾಸರ ಈ ವಾಣಿಗೆ ಪ್ರೇರಕವಾದದ್ದು "ಅಪರೋಕ್ಷೀಕೃತ– ಶ್ರೀಶಃ ಸಮುಪೇಕ್ಷಿತ ಭಾವಜಃ। ಅಪೇಕ್ಷಿತ ಪ್ರದಾತಾನ್ಯೋ ರಾಘವೇಂದ್ರಾನ್ನವಿದ್ಯತೇ ॥" ಎಂಬ ಅಪ್ಪಣ್ಣಾಚಾರ್ಯರ ವಚನ. ಇಷ್ಟಾರ್ಥವನ್ನು ಪೂರೈಸುವಲ್ಲಿ ಗುರುರಾಜರು ಸಮರ್ಥರು. ಆದರೆ ಗುರುರಾಜರು ಎಂಥಾ ಇಷ್ಟಾರ್ಥಗಳನ್ನು ಕೊಡುತ್ತಾರೆ ಎನ್ನುವುದನ್ನು ತಿಳಿಸುವುದಕ್ಕಾಗಿಯೇ ಅಪ್ಪಣ್ಣಾಚಾರ್ಯರು "ಅಪರೋಕ್ಷೀಕೃತಶ್ರೀಶಃ ಸಮುಪೇಕ್ಷಿತಭಾವಜಃ" ಎಂದು ಹೇಳಿ ಗುರುರಾಜರ ಸ್ವರೂಪದ ಪರಿಚಯವನ್ನು ತಿಳಿಸಿಕೊಟ್ಟಿದ್ದಾರೆ ರತ್ನಗಳನ್ನು ಮಾರುವ ಅಂಗಡಿಯಲ್ಲಿ ಅಜಿವಾನವನ್ನು ಬೇಡಿದರೆ ದೊರೆಯಲಾರದು ಗುರುರಾಜರ ನಿಜವಾದ ಸಂಪತ್ತು ಭಗವಂತ ಹಾಗೂ ಜ್ಞಾನ, ಭಕ್ತಿ, ವೈರಾಗ್ಯಗಳು. ಈ ಭಾಗವತ ಸಂಪತ್ತನ್ನು ಅಪೇಕ್ಷಿಸಿ ಬಂದ ಜನರಿಗೆ ಅದನ್ನು ಕರುಣಿಸಿಕೊಡುವ ಕರುಣಾಳುಗಳು ಗುರುಸಾರ್ವಭೌಮರು, ಈ ವಿಷಯವನ್ನೇ ಗುರುಶ್ರೀಶವಿಠಲರು ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟಪಡಿಸಿರುವರು —

ನಿಷ್ಠೆ ಇಂದನುಸರಿಸೆ ಕಷ್ಟಗಳು ದೂರ ಮನೊ
ಭೀಷ್ಟೆಗಳ ಪೂರೈಪರೋ ॥
ಅಷ್ಟ ಸೌಭಾಗ್ಯವನು ಕೊಟ್ಟು ಸುಜನರಿಗೆ ಶ್ರೀ
ವಿಷ್ಣು ದಾಸ್ಯವ ತೋರ್ಪರೋ ......

ಇಂಥಾ ಗುರುಸಾರ್ವಭೌಮರಲ್ಲಿ ಎಲ್ಲ ಹರಿದಾಸರು– "ಸಂಸಾರ ಸಾಗರದಿಂದ ಉದ್ಧರಿಸಿ, ಪಾರಮಾರ್ಥಿಕದತ್ತ ಎನ್ನ ಮನ ಸಾಗಿಸು" ಎಂದೇ ಪ್ರಾರ್ಥಿಸಿರುವರು ರಾಘವೇಂದ್ರ ಸ್ತೋತ್ರ ಕರ್ತೃಗಳಾದ ಅಪ್ಪಣ್ಣಾಚಾರ್ಯರು ಗುರುರಾಜರನ್ನು ಪ್ರಾರ್ಥಿಸುತ್ತಾ "ರಾಘವೇಂದ್ರಾ! ಭಯಂಕರವಾದ ಸಂಸಾರಸಾಗರದಿಂದ ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸಿರುವರು.

ಗುರುಜಗನ್ನಾಥದಾಸರು ಸಹ ತಮ್ಮ ಒಂದು ಕೃತಿಯಲ್ಲಿ .–

"ಭಾಗ್ಯವ್ಯಕ್ರಿಯಾದ್ವೈತ ಇದರನು–
ಭಾವವ ತಿಳಿಯದೆ ನಿರುತ
ಸೇವಿಪ ಸಂತತ ಈ ವಿಧ ನರರನು
ದೇವರೆಂದನುದಿನ ಭಾವಿಸಿದೆನು ನಾ ॥"
ರಾಘವೇಂದ್ರಗುರುರಾಯ ನೀ ವೇಗದಿ
ಪಿಡಿಯೆನ್ನ ಕೈಯ್ಯಾ।
ಆಗಮ ಸಂಚಿತ ಭೋಗಗಳುಳ್ಳ ಭವ
ಸಾಗರದೊಳು ಬಿದ್ದ ಬ್ಯಾಗನೆ ನೀ ಬಂದು ॥

ಎಂದು ಗುರುರಾಜರನ್ನು ಪ್ರಾರ್ಥಿಸಿರುವರು

ಇದೇ ದಾಸರೇ ಮತ್ತೊಂದೆಡೆ
"ಎಷ್ಟುವೇಳಲೆನ್ನ ಕಷ್ಟರಾಶಿಗಳನ್ನು
ಸುಟ್ಟುಬಿಡೋ ಸರ್ವೋತ್ಕೃಷ್ಟ ಮಹಿಮ ಗುರು"

ಎಂದು ಹೇಳಿ ತಮ್ಮ ಕಷ್ಟ ಪರಂಪರೆಗಳನ್ನು ಸುಟ್ಟುಬಿಡುವಂತೆ ಪ್ರಾರ್ಥಿಸಿರುವರು. ಆದರೆ ಇಲ್ಲಿ ತಮಗೆ ಬಂದೊದಗಿದ ಆ ಕಷ್ಟಗಳ ಪಟ್ಟಿಯನ್ನಾಗಲಿ, ಸ್ವರೂಪವನ್ನಾಗಲಿ ವಿವರಿಸಿಲ್ಲ. ಮುಂದಿನ ಚರಣದಲ್ಲಿ "ಮೋಕ್ಷದಾಯಕ ಎನ್ನ ಈಕ್ಷಿಸಿ ಮನೋಗತಾಪೇಕ್ಷಾವ ಪೂರೈಸೊ ತ್ರ್ಯಕ್ಷಾದಿ ಸುರಪ್ರೀತ" ಎಂದು ಹೇಳಿ ತಮ್ಮಮನದ ಅಪೇಕ್ಷೆಯನ್ನು ಪೂರೈಸುವಂತೆ ಪ್ರಾರ್ಥಿಸಿರುವರು. ಇಲ್ಲಿಯೂ ಸಹ ತಮ್ಮ ಮನೋಭೀಷ್ಟದ ಸ್ವರೂಪವನ್ನು ಸೂಚಿಸದೆ, ಗುರುರಾಜರಿಗೆ ಮಾತ್ರ "ಮೋಕ್ಷದಾಯಕ" ಎಂಬ ವಿಶೇಷಣವನ್ನು ಹಾಕಿ ಗುರುರಾಜರಿಗೇ ಎಚ್ಚರಿಕೆಯನ್ನಿತ್ತಿರುವರು. ಮೋಕ್ಷವೇ ತಮ್ಮ ಮನದಪೇಕ್ಷೆಯಾಗಿಯೂ, ಅದಕ್ಕೆ ವಿಘ್ನಗಳಾಗಿರುವ ವಿಷಯಲೋಲುಪತೆ, ಮನೋನಿಗ್ರಹರಾಹಿತ್ಯ, ಅಜ್ಞಾನ, ಅಹಂಕಾರ, ಮಮತೆಗಳೇ ಕಷ್ಟಪರಂಪರೆಗಳನ್ನಾಗಿ ಸೂಚಿಸಿರುವರು.

ಇಂತು ಎಲ್ಲ ಹರಿದಾಸರು ರಾಘವೇಂದ್ರಗುರುಸಾರ್ವಭೌಮರನ್ನು ಜ್ಞಾನ - ಭಕ್ತಿ - ವೈರಾಗ್ಯ ಮೂರ್ತೀಭವಿಸಿದ ಹರಿಭಕ್ತಾಗ್ರಣಿಗಳನ್ನಾಗಿಯೂ, ಸುಜೀವಿಗಳನ್ನು ಸಂಸಾರ ಬಂಧನದಿಂದ ಉದ್ಧರಿಸಲು ಬದ್ಧಕಂಕಣರಾದವರನ್ನಾಗಿಯೂ ಕಂಡು, ಅವರಲ್ಲಿ ಭಗವದ್ಭಕ್ತಿ, ವಿಷಯ ವಿರಕ್ತಿಯನ್ನೇ ಬೇಡಿರುವರು.

ಜಯತು ಜಯಗುರುರಾಜ ಶುಭತಮ
ಜಯತು ಕವಿಜನಗೇಯ ಸುಂದರ
ಜಯತು ನಿಜಜನಜಾಲಪಾಲಕ ಜಯತು
ಕರುಣಾಳೋ
ಜಯತು ಸಜ್ಜನ ವಿಜಯದಾಯಕ
ಜಯತು ಕುಜನಾರಣ್ಯ ಪಾವಕ
ಜಯತು ಜಯಜಯ ದ್ವಿಜವರಾರ್ಚಿತಪಾದ
ಪಂಕೇಜ

—

ಸಂದರ್ಶಿಸಿ ಆನಂದಿಸಿ

ಪ್ರಾಚ್ಯ ವಸ್ತು ಸಂಗ್ರಹಾಲಯ

(ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಎದುರು)

ಸಾವಿರ ಕಂಬದ ಸಭಾಂಗಣ

ತಿರುಮಲೆ

ಲೋಹ, ಮೃಚ್ಛಿಲಾದಾರು ಕೆತ್ತನೆಗಳ, ವಿವಿಧ ಸಂಗೀತೋಪಕರಣಗಳ, ವಾದ್ಯ, ಪ್ರಾಚೀನ ಕಾಲದ ಆಯುಧಗಳ, ಮಿಗಿಲಾಗಿ – ತಿ. ತಿ. ದೇವಸ್ಥಾನಗಳ ವಿವರಗಳ ಅಪೂರ್ವ ಸಂಗ್ರಹಾಲಯ.

ಪ್ರವೇಶ ದರ . ರೂ. 0-50 ಮಾತ್ರ.

# ಕಿಶೋರ ಜಗತ್



# ಗುರುದಕ್ಷಿಣೆ

—ಶ್ರೀನಿವಾಸ ಮಠದ ಬಿ.ಎಸ್ಸಿ.

ಯದುಕುಮಾರರಾದ ಶ್ರೀಕೃಷ್ಣ, ಬಲರಾಮರು ಯಾದವಕುಲ ಗುರುಗಳಾದ ಗರ್ಗಾಚಾರ್ಯರಿಂದ ಉಪನಯನ ಸಂಸ್ಕಾರವನ್ನು ಹೊಂದಿದವರಾಗಿ ತಂದೆಯಾದ ವಸುದೇವನಿಂದ "ಗಾಯತ್ರೀ" ಮಂತ್ರೋಪದೇಶವನ್ನು ಸ್ವೀಕರಿಸಿ, 'ಗುರುಕುಲವಾಸ'ಕ್ಕೆಂದು ಅವಂತೀನಗರದಲ್ಲಿದ್ದ ಶ್ರೀ ಸಾಂದೀಪನ್ಯಾಚಾರ್ಯರ ಆಶ್ರಯವನ್ನು ಸೇರಿದರು.

ಗುರುಕುಲದಲ್ಲಿ ಶಿಷ್ಯರು ಇಂದ್ರಿಯ ಜಯದಿಂದ, ವಿನಯದಿಂದ, ಶ್ರದ್ಧೆಯಿಂದ 64 ದಿನಗಳಲ್ಲಿ 64 ವಿದ್ಯೆಗಳನ್ನು ಸಂಪೂರ್ಣವಾಗಿ ಕಲಿತರು. ಸಕಲ ವೇದ ವೇದಾಂಗಗಳನ್ನು, ಧನುರ್ವಿದ್ಯೆಯನ್ನು, ಬ್ರಹ್ಮತರ್ಕವನ್ನು, ಮೀಮಾಂಸಾಶಾಸ್ತ್ರವನ್ನು ಹಾಗೂ ಷಡ್ವಿಧ ರಾಜನೀತಿಯನ್ನು ಕೇವಲ ಒಂದುಸಲ ಹೇಳಿದ ಮಾತ್ರದಿಂದಲೇ ಕಲಿತರು. ನಂತರ ಶಿಷ್ಯವರರು ಗುರುಗಳನ್ನು ಕುರಿತು ಗುರುದಕ್ಷಿಣೆಯಾಗಿ ಏನು ಕೊಡಬೇಕೆಂದು ಕೇಳಿದರು. ಲೋಕೋತ್ತರ ಪ್ರಜ್ಞರಾದ ಅವರ ಮಹಿಮೆಯನ್ನರಿತ ಸಾಂದೀಪನಿ ಗುರುಗಳು ತಮ್ಮ ಪತ್ನಿಯೊಡನೆ ಆಲೋಚಿಸಿದವರಾಗಿ ಪ್ರಭಾಸ ಸಮುದ್ರದಲ್ಲಿ ಮುಳುಗಿ ಹೋಗಿದ್ದ ತಮ್ಮ ಪುತ್ರನನ್ನು ಮತ್ತೆ ಬದುಕಿಸಿ ತಂದುಕೊಡಬೇಕೆಂದು ಕೇಳಿದರು. 'ಹಾಗೇ ಆಗಲಿ' ಎಂಬುದಾಗಿ ಹೇಳಿ ಶ್ರೀಕೃಷ್ಣಬಲರಾಮರು ರಥವನ್ನೇರಿ ಪ್ರಭಾಸಕ್ಕೆ ಬಂದರು.

ಅಲ್ಲಿ ಆ ಮಹಿಮರು ಬಂದಿರುವುದನ್ನು ನೋಡಿ ಸಮುದ್ರರಾಜನು ಬಂದು ಕಾಣಿಕೆಗಳನ್ನಿತ್ತು ಪೂಜಿಸಿದನು. ಆಗ ಶ್ರೀಕೃಷ್ಣನು "ವಾರುಣನೇ ಮೊದಲು ನಿನ್ನ ಅಲೆಗಳಲ್ಲಿ ಕಾಣದಾದ ನಮ್ಮ ಗುರುಪುತ್ರನನ್ನು ತಂದು ನಮಗೆ ಒಪ್ಪಿಸು" ಎಂದನು

ವಾರುಣನು "ದೇವಾ! ನಿಮ್ಮ ಗುರುಪುತ್ರನನ್ನು ಅಪಹರಿಸಿದವನು ನಾನಲ್ಲ. ಪಂಚಜನನೆಂಬ ರಾಕ್ಷಸನು ಇಲ್ಲಿ ನೀರಲ್ಲಿ ಇರುವನು. ಶಂಖರೂಪಿಯಾದ ಆ ದುಷ್ಟನೇ ಗುರುಸುತನನ್ನು ನುಂಗಿದ್ದಾನೆ. ಅವನನ್ನು ಶಿಕ್ಷಿಸುವುದು ನನ್ನಿಂದ ಸಾಧ್ಯವಿಲ್ಲದಾಗಿದೆ. ನೀನೇ ಅವನನ್ನು ಕೊಂದು ಲೋಕಕ್ಷೇಮವನ್ನು ಮಾಡು" ಎಂದನು.

ವಾರುಣನ ಈ ಮಾತನ್ನು ಕೇಳಿ ಶ್ರೀಕೃಷ್ಣನು ಜಲವನ್ನು ಹೊಕ್ಕು ಆ ಪಂಚಜನ ರಾಕ್ಷಸನನ್ನು ಸಂಹಾರ ಮಾಡಿದನು ಮತ್ತು ಅವನ ಹೊಟ್ಟೆಯಲ್ಲಿದ್ದ ಲಕ್ಷ್ಮೀಸಾನಿಧ್ಯ ಶೋಭಿತವಾದ ದಿವ್ಯವಾದ ಶಂಖವನ್ನು ಧರಿಸಿದನು. ಇದಕ್ಕೆ 'ಪಾಂಚಜನ್ಯ'ಶಂಖವೆಂದು ಕರೆಯುತ್ತಾರೆ.

ಅನಂತರದಲ್ಲಿ ಶ್ರೀಕೃಷ್ಣಬಲರಾಮರು ರಥವಲ್ಲಿ ಕುಳಿತು ಸಂಯಮನೀಪುರವನ್ನು ಸೇರಿದರು. ಶ್ರೀಕೃಷ್ಣನು ತನ್ನ ಪಾಂಚಜನ್ಯ ಶಂಖವನ್ನು ಊದಲು, ಆ ಧ್ವನಿಯನ್ನು ಕೇಳಿ ಪ್ರಜಾಶಮನನಾದ ಯಮನು ಬಿರಬಿರ ಸಂಭ್ರಮದಿಂದ ಬಂದು ಅವರಿಬ್ಬರನ್ನೂ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ಅವರಿಗೆ ವಂದಿಸಿ ಕೈಜೋಡಿಸಿ ನಿಂತು 'ನನ್ನಿಂದ ಯಾವ ಸೇವೆ ಸಲ್ಲಬೇಕು' ಎಂಬುದಾಗಿ ಬಿನ್ನವಿಸಿಕೊಂಡನು. ಶ್ರೀಕೃಷ್ಣನು ಅವನಿಗೆ "ತನ್ನ ಕರ್ಮದಂತೆ ಇಲ್ಲಿಗೆ ಬಂದಿರುವ ನಮ್ಮ ಗುರುಪುತ್ರನನ್ನು ತಂದೊಪ್ಪಿಸು" ಎಂದು ಆಜ್ಞಾಪಿಸಿದನು. ತತ್‌ಕ್ಷಣವೇ ಯಮನು ಆ ಗುರುಪುತ್ರನನ್ನು ಶ್ರೀಕೃಷ್ಣನಿಗೆ ತಂದೊಪ್ಪಿಸಿದನು.

ಈ ಗುರುಪುತ್ರನನ್ನು ರಥದಲ್ಲಿ ಕೂಡ್ರಿಸಿಕೊಂಡು ಬಂದು ಶ್ರೀಕೃಷ್ಣ ಬಲರಾಮರು ಗುರುಗಳಿಗೆ ನಮಿಸಿ, ಸಮರ್ಪಿಸಿದರು. ಅವರ ಮನೋರಥವನ್ನು ಪೂರ್ತಿಮಾಡಿ ಸಂತೋಷ ಪಡಿಸಿದರು. ಗುರುಗಳು ಶಿಷ್ಯೋತ್ತಮರಿಗೆ "ನಿಮ್ಮ ಕೀರ್ತಿ ಆಚಂದ್ರಾರ್ಕವಾಗಲಿ! ಸರ್ವದಾ ಪಾವನಮಯವಾಗಲಿ!" ಎಂಬುದಾಗಿ ತುಂಬು ಮನಸ್ಸಿನಿಂದ ಹರಸಿ ಬೀಳ್ಕೊಟ್ಟರು

ಇದರಿಂದ ನಮಗೆ ತಿಳಿಯುವುದೇನೆಂದರೆ ಗುರುಗಳಲ್ಲಿ ವಿನಯದಿಂದ, ಶ್ರದ್ಧೆಯಿಂದ ನಡೆದುಕೊಂಡು ಯೋಗ್ಯವಾದ ಗುರುದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸುವುದರಿಂದ ಸರ್ವರಿಗೂ ಐಹಿಕ ಪಾರಮಾರ್ಥಿಕ ಸೌಖ್ಯಗಳು ತಾವಾಗಿಯೇ ಬರುತ್ತವೆ ಎಂಬುದು ನಿಶ್ಚಿತವು.

ಅಹೋಭಾಗ್ಯಮಹೋಭಾಗ್ಯಂ ಗುರುಪಾದಾನುವರ್ತಿನ್ಯಂ |
ಐಹಿಕಾಮುಷ್ಮಿಕಂ ಸೌಖ್ಯಂ ವರ್ಧತೇ ತದನುಗ್ರಹೇತ್ ||

# ಸಂಜೀವಿನೀ ವಿದ್ಯೆ

ಶ್ರೀ ರಾ. ಅನಂತನಾರಾಯಣ

ಹಿಂದಿನಮಾತು. ಸ್ವರ್ಗದಲ್ಲಿದ್ದ ದೇವತೆಗಳಿಗೂ ಪಾತಾಳದಲ್ಲಿದ್ದ ರಾಕ್ಷಸರಿಗೂ ಆಗುತ್ತಿರಲಿಲ್ಲ. ಒಬ್ಬರ ಏಳಿಗೆಯನ್ನು ಕಂಡರೆ ಇನ್ನೊಬ್ಬರಿಗೆ ಅಸೂಯೆ. ಅವರಲ್ಲಿ ಆಗಾಗ ಕದನಗಳೂ ನಡೆಯುತ್ತಿದ್ದವು.

ದೇವತೆಗಳಿಗೆ ಮಹಾಜ್ಞಾನಿಯಾದ ಬೃಹಸ್ಪತ್ಯಾಚಾರ್ಯರು ಗುರುಗಳಾದರೆ, ರಾಕ್ಷಸರಿಗೆ ಜ್ಞಾನಸಂಪನ್ನರೂ ಮಹಾ ಪ್ರತಿಭಾಶಾಲಿಗಳೂ ಆದ ಶುಕ್ರಾಚಾರ್ಯರು ಗುರುಗಳು. ಇವರಿಬ್ಬರೂ ಬುದ್ಧಿಬಲದಿಂದ ಒಬ್ಬರನ್ನೊಬ್ಬರು ಮೀರಿಸುವಂತಿದ್ದರು.

ಶುಕ್ರಾಚಾರ್ಯರು ಮೃತಸಂಜೀವಿನೀ ಮಂತ್ರಸಿದ್ಧಿ ಪಡೆದಿದ್ದರಿಂದ ರಾಕ್ಷಸರ ಬಲ ಹೆಚ್ಚಾಯಿತು. ಈ ಮಂತ್ರದ ಬಲದಿಂದ ಸತ್ತವರನ್ನೂ ಬದುಕಿಸಬಹುದಿತ್ತು.

ಇದರಿಂದ ದೇವತೆಗಳು ಪೇಚಾಟಕ್ಕೆ ಈಡಾಗಿ 'ತಾವೂ ಈ ವಿದ್ಯೆಯನ್ನು ಕಲಿಯಬೇಕು' ಎಂದುಕೊಂಡರು. ಆದರೆ ಅದನ್ನು ಕಲಿಯುವುದು ಹೇಗೆ? ಯಾರಾದರೂ ಶುಕ್ರಾಚಾರ್ಯರ ಶಿಷ್ಯರಾಗಿ ಆ ಮಂತ್ರವನ್ನು ಕಲಿಯಬೇಕು. ವೈರಿನಗರವನ್ನು ಪ್ರವೇಶಿಸಿ ಶುಕ್ರಾಚಾರ್ಯರ ಪ್ರೀತಿಯನ್ನು ಸಂಪಾದಿಸಿ ಮೃತ ಸಂಜೀವಿನೀ ಮಂತ್ರವನ್ನು ಪಡೆದು ಬರಬಲ್ಲ ಸಾಹಸಿ ಯಾರು? ಅಂತಹ ಸಾಹಸಿಯೊಬ್ಬನಿದ್ದಾನೆ ಎನಿಸಿತು ದೇವತೆಗಳಿಗೆ. ಅವನೇ ಬೃಹಸ್ಪತಿಯ ಮಗ ಕಚ. ಅವನು ಸುಂದರ, ಗುಣಶಾಲಿ, ಎಂತಹ ಅಪರಿಚಿತರೊಡನೆ ಬೇಕಾದರೂ ಸ್ನೇಹ ಸಂಪಾದಿಸಬಲ್ಲ ಸರಸಿ, ಈತನನ್ನೇ ಈ ಸಾಹಸ ಕಾರ್ಯಕ್ಕೆ ಕಳುಹಿಸುವುದೆಂದು ದೇವತೆಗಳು ತೀರ್ಮಾನಿಸಿದರು.

ದೇವತೆಗಳು ಕಚನ ಬಳಿ ಹೋಗಿ ತಮ್ಮ ಕಷ್ಟವನ್ನೆಲ್ಲಾ ಹೇಳಿ, 'ಮಗು, ಮಹಾಮಹಿಮರಾದ ಶುಕ್ರಾಚಾರ್ಯರ ಬಳಿ ನೀನು ಶಿಷ್ಯವೃತ್ತಿಯನ್ನು ಸಂಪಾದಿಸಿ, ಅವರ ಮುದ್ದಿನ ಮಗಳಾದ ದೇವಯಾನಿಯೂ ಮೆಚ್ಚುವಂತೆ ಅವರ ಸೇವೆ ಮಾಡಿ, ಅವರನ್ನು ಹರ್ಷಗೊಳಿಸಬೇಕು. ಅನಂತರ ಸಂಜೀವಿನೀ ಮಂತ್ರವನ್ನು ಕಲಿತು ಎಚ್ಚರಿಕೆಯಿಂದ ಹಿಂತಿರುಗಬೇಕು, ಎಂದರು.

ಧೀರನೂ, ಸಂಯಮಿಯೂ ಆದ ಕಚ ನಗುನಗುತ್ತಲೇ ಈ ಮಹತ್ತರವಾದ ಕಾರ್ಯವನ್ನು ಸಾಧಿಸಲು ಒಪ್ಪಿಕೊಂಡನು.

ರಾಕ್ಷಸರ ದೊರೆಯಾದ ವೃಷಪರ್ವನ ನಗರದಲ್ಲಿ ಶುಕ್ರಾಚಾರ್ಯರು ವಾಸಿಸುತ್ತಿದ್ದರು. ಅವರೊಡನೆ ಅವರ ಒಬ್ಬಳೇ ಮಗಳಾದ ದೇವಯಾನಿಯೂ ಇದ್ದಳು. ಈ ಎಳೆ ವಯಸ್ಸಿನ ಬಾಲಿಕೆ ಬಹಳ ಕೋಪಿಷ್ಠೆಯೂ ಸ್ವಾಭಿಮಾನಿಯೂ ಆಗಿದ್ದಳು. ಅಷ್ಟೇ ವಿದ್ಯಾವತಿಯೂ, ಸುಂದರಿಯೂ ಆಗಿದ್ದಳು.

ಒಂದು ದಿನ ಶುಕ್ರಾಚಾರ್ಯರ ನಿವಾಸಕ್ಕೆ ಸುಂದರನೂ, ತೇಜಸ್ವಿಯೂ ಆದ ತರುಣನೊಬ್ಬನು ಬಂದನು. ಆಚಾರ್ಯರ ಸನ್ನಿಧಿಗ ಹೋಗಿ ಕೈ ಮುಗಿದು ತಲೆ ಬಾಗಿ ನಿಂತ. ಬಂದವನು ಕಚ. ದೇವಗುರುವಿನ ಮಗ ರಾಕ್ಷಸಗುರುವಿನ ಮುಂದೆ ತಲೆಬಾಗಿ ನಿಂತಿದ್ದಾನೆ.

" ಮಹಾಮಹಿಮರೇ, ದೇವಗುರು ಬೃಹಸ್ಪತಿಯ ಮಗನಾದ ನನ್ನನ್ನು ಕಚ ಎಂದು ಕರೆಯುವರು. ನಾನು ತಮ್ಮ ಮುಂದೆ ವಿದ್ಯಾರ್ಥಿಯಾಗಿ ನಿಂತಿರುವೆ" ಎಂದು ಹೇಳಿದನು.

ಆಚಾರ್ಯರು ಕಚನನ್ನು ಗಮನಿಸಿದರು. ಅವನ ಸುಂದರ ವರ್ಚಸ್ಸನ್ನು ಕಂಡು ಅವರ ಮನದಲ್ಲಿ ವಾತ್ಸಲ್ಯ ಉಕ್ಕಿತು.

ಕಚನು ತಾನು ಬೃಹಸ್ಪತಿಗಳ ಮಗ ಎಂದು ಹೇಳಿದ್ದ. ದೇವತೆಗಳಿಗೂ ರಾಕ್ಷಸರಿಗೂ ಬದ್ಧ ದ್ವೇಷ. ದೇವತೆಗಳ ಗುರು ಮಗನನ್ನು ರಾಕ್ಷಸರ ಗುರುವಿನ ಒಳಿಗೆ ಶಿಷ್ಯನಾಗು ಎಂದು ಏಕೆ ಕಳುಹಿಸಬೇಕು? ಎಂದು ಶುಕ್ರಾಚಾರ್ಯರ ಒಳಮನಸ್ಸು ಕಚನ ಉದ್ದೇಶವನ್ನು ಗುರುತಿಸಿತು.

ಬೃಹಸ್ಪತ್ಯಾಚಾರ್ಯರು ಅರಿಯದ ವಿದ್ಯೆಯೆಂದರೆ ಮೃತಸಂಜೀವಿನೀ ವಿದ್ಯೆ. ಅದನ್ನು ಕಲಿಯಲೆಂದೇ ಈ ಬಾಲಕ ಬಂದಿರಬೇಕು. ಅವರಲ್ಲಿ ಏನೋ ಆಸೆ ಮೂಡಿತು. ಆಚಾರ್ಯರು ತಮ್ಮ ಮಗಳನ್ನು ಕರೆದು "ಮಗು ದೇವಯಾನಿ, ಇಂದಿನಿಂದ ಕಚ ನಿನ್ನ ಒಡನಾಡಿಯಾಗಿ ನಮ್ಮ ಒಳಿಯೇ ಇರುತ್ತಾನೆ. ಇನ್ನು ಮುಂದ ಅವನೇ ನನ್ನ ಸೇವೆಯನ್ನು ಮಾಡುವುದು" ಎಂದು ಆಜ್ಞಾಪಿಸಿದರು.

ಅಂದಿನಿಂದ ಮೊದಲಾಗಿ ಕಚ ಗುರುಗಳ ಸೇವೆಯಲ್ಲಿ ಮಗ್ನನಾದ. ಒಂದು ಕ್ಷಣವನ್ನೂ ವ್ಯರ್ಥಮಾಡದೆ ಗುರುಗಳ ಕಾರ್ಯದಲ್ಲಿ ನೆರವಾಗುತ್ತಿದ್ದ. ಏಕಾಂಗಿಯಾಗಿದ್ದ ದೇವಯಾನಿಯ ಮನಸ್ಸು ಹರ್ಷಗೊಳ್ಳುವಂತೆ ಹಲವಾರು ರಾಗಗಳನ್ನು ಹಾಡಿ ಬಗೆಬಗೆಯ ವಾದ್ಯಗಳನ್ನು ನುಡಿಸಿ ಅವಳು ಯಾವಾಗಲೂ ಹಸನ್ಮುಖಿಯಾಗಿರುವಂತೆ ಮಾಡುತ್ತಿದ್ದ. ಇವೆಲ್ಲವನ್ನೂ ಕಂಡು ಶುಕ್ರಾಚಾರ್ಯರು ಸಂತುಷ್ಟರಾಗುತ್ತಿದ್ದರು.

ಮಹಾಜ್ಞಾನಿಗಳಾದ ಶುಕ್ರಾಚಾರ್ಯರು ತುಂಬು ಮನಸ್ಸಿನಿಂದ ಕಚನಿಗೆ ಉಪದೇಶ ಮಾಡಿದರು. ಶ್ರದ್ಧೆಯಿಂದ ಲೀಲಾಜಾಲವಾಗಿ ಎಲ್ಲವನ್ನೂ ಕಲಿತ ಕಚನು ತಂದೆ ಮಗಳ ವಿಶ್ವಾಸಕ್ಕೆ ಪಾತ್ರನಾದನು.

ಶುಕ್ರಾಚಾರ್ಯರ ಬಳಿ ಕಲಿಯುತ್ತಿದ್ದ ಇತರ ದಾನವ ವಟುಗಳು ಇದನ್ನು ಕಂಡು ಚಿಂತೆಗೀಡಾದರು. ಒಂದು ದಿನ ಕಚನು

ಸಾವೆ ತರಲೆಂದು ಕಾಡಿಗೆ ಹೋದಾಗ ಅವರು ಕಚನನ್ನು ಮುತ್ತಿ "ಯಾರು ನೀನು?" ಎಂದು ಕೇಳಿದರು. "ನಾನು ಕಚ. ಬೃಹಸ್ಪತಿಗಳ ಮಗ" ಎಂದನು. "ಹಾಗಾದರೆ ಇಲ್ಲಿಗೇಕೆ ಬಂದೆ? ಸಂಜೀವಿನೀ ವಿದ್ಯೆ ಕಲಿಯಲೆಂದೋ?' ಎಂದು ಕಚನನ್ನು ಜೋರಾಗಿ ಕತ್ತರಿಸಿ ತಮ್ಮ ಒಳಿಯಿದ್ದ ನಾಯಿಗಳಿಗೆ ತಿನ್ನಿಸಿ ಬಿಟ್ಟರು. ಇದರಿಂದ ನಮಗೆ ಬಂದ ವಿಪತ್ತು ತೊಲಗಿತು ಎಂದು ಸಂತೋಷಪಡುತ್ತಾ ಹೊರಟುಹೋದರು.

ಇತ್ತ ಕಡೆ ಕಚನಿಗಾಗಿ ದೇವಯಾನಿ ಕಾಯುತ್ತಾ ಕುಳಿತಳು. ರಾತ್ರಿಯಾದರೂ ಬಾರದಿದ್ದುದರಿಂದ ಭಯವಾಗಿ ತಂದೆ ಬಳಿ ಹೋಗಿ ಕಚನಿನ್ನೂ ಬರಲಿಲ್ಲವೆಂದು ತಿಳಿಸಿದಳು. ಶುಕ್ರಾಚಾರ್ಯರಿಗೆ ಇದು ಅಸುರರ ಕೆಲಸವೆಂದು ಗೊತ್ತಾಯಿತು. ಸಂಜೀವಿನಿ ಮಂತ್ರವನ್ನು ಪ್ರಯೋಗಿಸಿ "ಕಚ ಬಾ" ಎನ್ನಲು ನಾಯಿಗಳ ಒಡಲನ್ನು ಸೀಳಿಕೊಂಡು ಕಚನು ಹೊರಕ್ಕೆ ಬಂದನು. ನಡೆದುದನ್ನೆಲ್ಲಾ ಗುರುಗಳಿಗೆ ಹೇಳಿದನು. ಕಚನನ್ನು ಕೊಂದೆವೆಂದು ಹಿಗ್ಗುತ್ತಿದ್ದ ರಕ್ಕಸರು ಕಚ ಬದುಕಿರುವುದನ್ನು ಕಂಡು ನಿರಾಸೆಗೊಂಡರು. ಪುನಃ ಅವನನ್ನು ಕೊಲ್ಲಬೇಕೆಂದು ತೀರ್ಮಾನಿಸಿದರು. ಆದರೆ ಹೇಗೆ ಕೊಲ್ಲುವುದು? ಯಾವ ರೀತಿಯಲ್ಲಿ ಕೊಂದರೂ ಗುರುಗಳು ಅವನಿಗೆ ಜೀವ ಕೊಡುತ್ತಾರೆ. ಆದರೂ ಕಚನನ್ನು ಕೊಲ್ಲಲೇಬೇಕು ಇಲ್ಲದಿದ್ದರೆ ನಮಗೆ ಉಳಿಗಾಲವಿಲ್ಲ ಎಂದು ಅವರೆಲ್ಲಾ ಸೇರಿ ಯೋಚಿಸಿದರು.

ಕೊನೆಗೆ ರಕ್ಕಸರು ಒಂದು ಉಪಾಯವನ್ನು ಕಂಡುಕೊಂಡರು. ಅದೇನೆಂದರೆ, ಕಚನನ್ನು ಕೊಂದು ಹಾಕಿ ಅವನ ದೇಹವನ್ನು ಸುಟ್ಟು, ಆ ಬೂದಿಯನ್ನು ಹಾಲಿನಲ್ಲಿ ಹಾಕಿ ಗುರುಗಳಿಗೇ ಕುಡಿಸುವುದೆಂಬುದು. ಇದರಿಂದ ಗುರುಗಳ ಉದರದಲ್ಲಿ ಕಚನು ಇರುವುದರಿಂದ ಸಂಜೀವಿನೀ ಮಂತ್ರವನ್ನು ಅವರು ಪ್ರಯೋಗಿಸುವುದಿಲ್ಲ. ಆದ್ದರಿಂದ ಇದೇ ಸರಿಯಾದ ಉಪಾಯ ಎಂದು ತೀರ್ಮಾನಕ್ಕೆ ಬಂದರು.

ಕೆಲವು ದಿನಗಳು ಕಳೆದವು. ಒಂದು ದಿನ ನದಿಯಲ್ಲಿ ಕಚನು ಸ್ನಾನಮಾಡುತ್ತಿದ್ದ. ಆಗ ಕೆಲವಾರು ಜನ ಹಿಂದಿನಿಂದ ಬಂದು ಅವನನ್ನು ಹಿಡಿದು ಕಡಿದು ಹಾಕಿದರು. ನಂತರ ಅವನ ದೇಹವನ್ನು ಸುಟ್ಟು ಬೂದಿ ಮಾಡಿ ಆ ಬೂದಿಯನ್ನು ಸುಗಂಧ ಪರಿಮಳ ಬೀರುವ ಹಾಲಿನಲ್ಲಿ ಕಲಕಿ ಗುರುಗಳ ಮನೆಯ ಕಡೆ ನಡೆದರು.

ಗುರುಗಳ ಮುಂದೆ ನಿಂತು ಭಯಭಕ್ತಿಯಿಂದ 'ಗುರುಗಳೇ ಈ ಸುಗಂಧ ಪೂರಿತವಾದ ಹಾಲನ್ನು ತಮ್ಮ ಪ್ರೀತ್ಯರ್ಥವಾಗಿ ತಂದಿದ್ದೇವೆ ಸ್ವೀಕರಿಸಬೇಕೆ'ಂದು ಬೇಡಿಕೊಂಡರು.

ಗುರುಗಳು ಸಂಪ್ರೀತರಾಗಿ ಅದನ್ನು ಸೇವಿಸಿದರು. ನಮ್ಮ ಬಯಕೆ ಸಾರ್ಥಕವಾಯಿತು ಎಂದು ಹಿಗ್ಗಿ ಅವರು ಅಲ್ಲಿಂದ ಬೇಗ ಹೊರಟು ಹೋದರು.

ಸಂಜೆಯಾಯಿತು. ಕಚ ಇನ್ನೂ ಏಕೆ ಬರಲಿಲ್ಲವೆಂದು ದೇವಯಾನಿ ಕಳವಳಗೊಂಡಳು, ಎಲ್ಲಾ ಕಡೆ ಹುಡುಕಿದಳು. ನಂತರ ದುಃಖದಿಂದ ತಂದೆಯ ಬಳಿ ಹೋಗಿ "ತಂದೆಯೇ ರಕ್ಕಸರು ಪುನಃ ಕಚನನ್ನು ಕೊಂದಿದ್ದಾರೆ' ಎಂದು ಅಳತೊಡಗಿದಳು. ಅವಳು ಅಳುವುದನ್ನು ಕಂಡು ಗುರುಗಳ ಮನಸ್ಸು ಕರಗಿತು. ಅವರು ತಮ್ಮ ದಿವ್ಯ ಜ್ಞಾನದಿಂದ ಕಚನು ಎಲ್ಲಿರುವನೆಂದು ತಿಳಿಯಲು 'ಕಚನೇ ಎಲ್ಲಿರುವೆ' ಎಂದು ಕೇಳಲು "ಗುರುಗಳೇ ನಿಮ್ಮ ಉದರದಲ್ಲಿರುವೆ' ಎಂದು ಕಚನ ಜೀವ ಉತ್ತರಿಸಿತು

ಆಗ ಗುರುಗಳಿಗೆ ರಾಕ್ಷಸರ ಕೆಲಸ ಗೊತ್ತಾಯಿತು. ಅವರು ಕೋಪಾವಿಷ್ಟರಾಗಿ "ಗುರುವಿಗೆ ಅಪಚಾರ ಮಾಡುವ ಈ ದಾನವರು ಎಂದೂ ಏಳ್ಗೆ ಹೊಂದದೆ ಹೋಗಲಿ" ಎಂದು ಶಪಿಸಿದರು.

"ಮಗು ದೇವಯಾನಿ ನೀನು ಕಚನ ಆಸೆ ಬಿಟ್ಟು ಬಿಡು" ಎಂದು ಹೇಳಿ ಸಮಾಧಾನ ಮಾಡಲೆತ್ನಿಸಿದರು.

---

# ವೀರ ಬಾಲಕರು

**— ಜಯಸಿಂಹ**

ನೆನೆದರೆ ಸಾಕು ನವಿರೇಳುವುದು
ರೋಮ ರೋಮಗಳು ಮೈಯೊಳಗೆ ।
ಎಂಥಹ ವೀರ ಬಾಲಕರಾದರು
ನಮ್ಮೀ ಭಾರತ ಭುವಿಯೊಳಗೆ ॥ ೧

ಹೆತ್ತ ತಾಯಿಯ ಮಾನವನುಳಿಸಲು
ತನುಮನವಿತ್ತ ಬಾಲಕರು ।
ಹೊತ್ತ ದೇಶದ ಗೌರವ ಬೆಳೆಸಲು
ಪ್ರಾಣವ ತೆತ್ತ ಬಾಲಕರು ॥ ೨

ದೇವರ ಕಂಡೇ ಕಾಣುವೆ ಎಂದು
ಕಾಡಿಗೆ ನಡೆದ ಬಾಲಕರು ।
ಅಂಜದೆ ಅಳುಕದೆ ಧ್ಯಾನವ ಮಾಡಿ
ದೇವರ ನೋಡಿದ ಬಾಲಕರು ॥ ೩

ತತ್ತ್ವದ ತಳವನು ಶೋಧಿಸಿ ತಿಳಿಯಲು
ಯಮನನೆ ಕಂಡ ಬಾಲಕರು ।
ವಿಷಯವ ವರ್ಜಿಸಿ ವಿರಕ್ತರಾಗಿ
ಮುಕ್ತಿಯ ಪಡೆದ ಬಾಲಕರು ॥ ೪

ಸೀತಾಮಾತೆಯ ಪ್ರೀತಿಯ ಸುತರು
ಸಿಂಹದ ಮರಿಗಳು ಲವಕುಶರು ।
ಕ್ಷತ್ರಿಯ ಧರ್ಮದ ಪಾಲನೆ ಮಾಡಲು
ತಂದೆಯೊಡನೆಯೂ ಕಾದಿಹರು ॥ ೫

ಗುರುವಿನ ಮಾತನು ಉಳಿಸಲು ತಮ್ಮ
ಬೆರಳನೆ ಕೊಟ್ಟ ಬಾಲಕರು ।
ಚಕ್ರವ್ಯೂಹವ ಭೇದಿಸಿ ನಡೆದು
ಕೀರ್ತಿಯ ಗಳಿಸಿದ ಬಾಲಕರು ॥ ೬

ಧನ್ಯರು ಧನ್ಯರು ವೀರ ಬಾಲಕರು
ತಾಯಿಯ ಹೆಸರನು ಮೆರೆದಿಹರು ।
ಎಂದಿಗೂ ಮಾನ್ಯರು ಲೋಕದೊಳಿವರು
ತಾರೆಗಳಂದದಿ ಬೆಳಗುವರು ॥ ೭

"ಅಯ್ಯೋ ತಂದೆ, ಕಚನಿಲ್ಲದೆ ನಾನು ಬದುಕಲಾರೆ. ಇದು ನಿಜವಾದರೆ ನನಗೆ ಮರಣವುಂಟಾಗಲಿ" ಎಂದು ರೋಧಿಸಲಾರಂಭಿಸಿದಳು. "ಮಗಳೇ, ಕಚ ಈಗ ನನ್ನ ಉದರದಲ್ಲಿದ್ದಾನೆ. ಅವನು ಬದುಕಬೇಕಾದರೆ ನಾನು ಸಾಯಬೇಕು. ಇದು ನಿನಗೆ ಒಪ್ಪಿಗೆಯೇ? ಎಂದು ಕೇಳಿದರು. ದೇವಯಾನಿಗೆ ಈಗ ದಿಕ್ಕೇ ತೋಚದ ಹಾಗಾಯಿತು. ಈ ಕಡೆ ಕಚ, ಆ ಕಡೆ ತಂದೆ. ಇನ್ನು ತನಗೆ ಸಾವೇ ಶರಣು ಎಂದುಕೊಂಡಳು.

ಮಗಳು ದುಃಖಗೊಂಡಿರುವುದನ್ನು ಕಂಡು – ಕಚನನ್ನು ಬದುಕಿಸದೆ ಮಗಳಿಗೆ ಸುಖವಿಲ್ಲ. ಕಚನನ್ನು ಉಳಿಸುವ ಒಂದು ಮಾರ್ಗವೆಂದರೆ ಅವನಿಗೆ ಸಂಜೀವಿನಿ ಮಂತ್ರವನ್ನು ಬೋಧಿಸುವುದು. ಮಂತ್ರವನ್ನು ಉಪದೇಶಿಸಿದರೆ ಅದನ್ನು ದೇವತೆಗಳಿಗೇ ಕೊಟ್ಟಂತಾಯಿತು. ತನಗೇ ಈ ರೀತಿ ಅಪಚಾರ ಮಾಡಿದ ದಾನವರ ಮೇಲೆ ಕೋಪ ಬಂದು ಇವರನ್ನು ಕಾಪಾಡಿ ಏನು ಪ್ರಯೋಜನ ಎಂದು ಯೋಚಿಸಿ, 'ಮಗು ದೇವಯಾನಿ, ದುಃಖಿಸಬೇಡ. ಈಗ ಕಚನಿಗೆ ಸಂಜೀವಿನೀ ಮಂತ್ರವನ್ನು ಉಪದೇಶಿಸಿ ಅವನನ್ನು ಕರೆಯುವೆ, ಅವನು ನನ್ನನ್ನು ಸೀಳಿಕೊಂಡು ಹೊರಬಂದು ನಂತರ ಸಂಜೀವಿನಿ ಮಂತ್ರದಿಂದ ನನ್ನನ್ನು ಬದುಕಿಸುವನು' ಎಂದರು.

ಆಚಾರ್ಯರು, "ಕಚನೇ ಗಮನವಿಟ್ಟು ಕೇಳು, ಸಂಜೀವಿನೀ ಮಂತ್ರವನ್ನು ಉಪದೇಶಿಸುವೆ" ಎಂದರು.

ಈ ಮಾತನ್ನು ಕೇಳಿ ಕಚನು ರೋಮಾಂಚನಗೊಂಡನು. ನನ್ನ ಗುರಿ ಸಾಧಿಸುತ್ತಿದೆ ಎಂದು ಆನಂದಗೊಂಡನು. ಗುರುಗಳು ಮಂತ್ರವನ್ನು ಉಪದೇಶಿಸಿದ ಮೇಲೆ ಕಚನು ಗುರುಗಳ ಉದರವನ್ನು ಸೀಳಿಕೊಂಡು ಹೊರಬಂದನು. ನಂತರ ಮಂತ್ರವನ್ನು ಪ್ರಯೋಗಿಸಿ ಗುರುಗಳನ್ನೂ ಬದುಕಿಸಿದನು.

ಸಂಜೀವಿನೀ ವಿದ್ಯೆ ಕಲಿಯಲೆಂದೇ ಬಂದ ಕಚನ ಗುರಿ ಈಡೇರಿತು. ಆದರೂ ಕಚನ ಗುರು ಸೇವೆ ಉತ್ಸಾಹದಿಂದ ಮುಂದುವರೆಯಿತು. ಹಲವಾರು ವರ್ಷಗಳ ನಂತರ ಅವನ ವಿದ್ಯೆ ಪೂರ್ಣಗೊಂಡಿತು. ಕಚನು ದೇವಲೋಕಕ್ಕೆ ಹಿಂತಿರುಗಲು ಅಪ್ಪಣೆ ದೊರೆಯಿತು.

ಆಚಾರ್ಯರನ್ನು ಬೀಳ್ಕೊಡುವ ದಿನ ಬಂದಿತು "ಆಚಾರ್ಯರೇ, ನಾನು ನಿಮ್ಮ ಶಿಷ್ಯ ಮಾತ್ರ ಅಲ್ಲ ಪುತ್ರನೂ ಕೂಡ. ನಿಮ್ಮ ಒಡಲಿನಿಂದ ಜನಿಸಿ ಬಂದವನು. ನನ್ನ ಬಾಳು ನಿಮ್ಮ ಪಾದಗಳಲ್ಲಿ ಸಮರ್ಪಿತ" ಎಂದು ಕಚನು ನಮಸ್ಕರಿಸಿದನು. ಗುರುಗಳು "ಮಗು ಯಶೋವಂತನಾಗಿ ಬಾಳಿ ಕಲಿತ ವಿದ್ಯೆಯನ್ನು ಸಾರ್ಥಕವಾಗಿ ಬಳಸು" ಎಂದು ಆಶೀರ್ವದಿಸಿದರು.

ನಂತರ ಕಚನು ದೇವಯಾನಿಯನ್ನು ಕಾಣಲು ಹೊರಟನು. ದೇವಯಾನಿಯು ಉದ್ಯಾನವನದಲ್ಲಿ ಒಬ್ಬಳೇ ಚಿಂತೆಯಲ್ಲಿ ಮುಳುಗಿ ಹೋಗಿದ್ದಳು. ಕಚನು ಸ್ನೇಹದಿಂದ "ದೇವಯಾನಿ ಇಲ್ಲೇನು ಮಾಡುವೆ" ಎಂದನು ದೇವಯಾನಿಯು "ನಿನ್ನ ವಿದ್ಯಾಭ್ಯಾಸ ಪೂರೈಸಿತು. ಇನ್ನು ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮವಲ್ಲವೇ?" ಎಂದು ಕೇಳಿದಳು. ಇದನ್ನು ಕೇಳಿ ಕಚನಿಗೆ ಸೋಜಿಗವಾಯಿತು. ದೇವಯಾನಿಯೇ ಧೈರ್ಯವಾಗಿ 'ನೀನು ನನ್ನನ್ನು ಮದುವೆಯಾಗಬೇಕು,' ಎಂದು ಕೇಳಿದಳು. ಕಚನು, 'ದೇವಯಾನಿ ನೀನು ನನ್ನ ಗುರು ಪುತ್ರಿ, ತಂಗಿಗೆ ಸಮಾನ ಎಂದು ವಿನಯದಿಂದ ತಿಳಿಸಿದನು. ಇದರಿಂದ ನಿರಾಶೆಯಾಗಿ ಕೋಪಗೊಂಡು "ಸಂಜೀವಿನೀ ಮಂತ್ರ ಕಲಿಯಲೆಂದೇ ಬಂದ ಧೂರ್ತ ನೀನು. ನಿನಗೆ ಈ ಮಂತ್ರ ಫಲಿಸದೇ ಹೋಗಲಿ" ಎಂದು ಶಪಿಸಿದಳು.

ಇದರಿಂದ ಜಿಗುಪ್ಸೆಗೊಂಡ ಕಚನು "ನಾನು ಕಲಿತ ವಿದ್ಯೆ ನನಗೆ ಫಲಿಸದೇ ಹೋಗಲಿ ಎಂದು ಶಪಿಸಿದೆ. ಆದರೆ ಇದು ನನ್ನಿಂದ ಕಲಿತವರಿಗೆ ಫಲಿಸಿದರೆ ಸಾಕು. ನಿನ್ನ ದರ್ಪ, ಕೋಪಗಳಿಗೆ ತಕ್ಕಂತೆ ನಿನ್ನನ್ನು ಯಾವ ಬ್ರಾಹ್ಮಣ ತರುಣನೂ ವರಿಸದೆ ಕ್ಷತ್ರಿಯನ ಪತ್ನಿಯಾಗು" ಎಂದು ಶಪಿಸಿದನು.

ಕಚನು ದೇವಲೋಕವನ್ನು ಸೇರಿ ಸಂಜೀವಿನೀ ಮಂತ್ರವನ್ನು ಇವರರಿಗೆ ಉಪದೇಶಿಸಿ ಆದರ ಫಲ ದೇವಸಮಾಜಕ್ಕೆ ದೊರಕುವಂತೆ ಮಾಡಿ ಕೀರ್ತಿಶಾಲಿಯಾದನು.

---


## ಆರ್ಜಿತ ಅಭಿಷೇಕ

## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.



# ಗೃಹಲಕ್ಷ್ಮಿ





# ಶ್ರೀ ತುಲಸಿಯ ಹಿರಿಮೆ

**ಶ್ರೀ ಕೆ. ಎಸ್. ರಾಮಮೂರ್ತಿ**

ವಿಷ್ಣು ಪೂಜಕರಿಗೆ ಪವಿತ್ರವೆನಿಸಿದ ತುಲಸಿಯ ಮೂಲ, ವೈಷ್ಣವರು ಅದಕ್ಕೆ ನೀಡಿರುವ ಮಹತ್ವ, ಅದರ ಉಪಯೋಗಗಳನ್ನು ಕುರಿತು ತಿಳಿಯುವುದೇ ಈ ಬರಹದ ಉದ್ದೇಶ.

ಇದೊಂದು ವನಸ್ಪತಿ. ತುಲಸಿ, ತೊಳಜಿ, ವೃಂದೆ, ವೈಜಯಂತಿ ಮೊದಲಾದ ನಾನಾ ಹೆಸರುಗಳಿಂದ ಇದನ್ನು ಕರೆಯುತ್ತಾರೆ. ವೈಷ್ಣವರು ಇದನ್ನು ಪವಿತ್ರವೆಂದು ಭಾವಿಸಿ, ವಿಷ್ಣುವನ್ನು ಈ ಸಸ್ಯದ ದಳಗಳಿಂದ ಅರ್ಚಿಸುವರು. ಕಟ್ಟಾ ವೈಷ್ಣವರು ಏಕಾದಶಿಯಂದು ತೀರ್ಥ ಮತ್ತು ತುಲಸಿದಳವೊಂದನ್ನು ಬಿಟ್ಟು ಮತ್ತೇನನ್ನೂ ಸ್ವೀಕರಿಸದೆ ಉಪವಾಸ ವ್ರತ ನಡೆಸುವರು ಇದರ ಮಣಿಗಳಿಂದ ಜಪಮಾಲೆಯನ್ನು ಮಾಡುವರು. ಶ್ರೀಕೃಷ್ಣನಿಗಂತೂ ತುಲಸೀದಳ ಪರಮಪ್ರಿಯವೆಂದು ಭಾಗವತದಲ್ಲಿ 'ಶ್ರೀಕೃಷ್ಣ ತುಲಾಭಾರ' ಪ್ರಸಂಗದಿಂದ ತಿಳಿಯಬಹುದು. ತುಲಸಿ ಸಸ್ಯ ಹಾಗೂ ವಿಷ್ಣುವಿಗೂ ಸಂಬಂಧಿಸಿದ ಹಲವು ವಿಷಯಗಳು ಭಾಗವತದಲ್ಲಿ, ಪುರಾಣಗಳಲ್ಲಿ ಕಂಡು ಬರುತ್ತದೆ.

ಹಾಲ್ಗಡಲನ್ನು ಕಡೆದಾಗ ಅಲ್ಲಿ ಐರಾವತ ಮೊದಲಾದ 14 ರತ್ನಗಳು ದೊರೆತುವು. ಇದಲ್ಲದೆ ಅಮೃತ ಕಲಶವೊಂದು ದೊರೆಯಿತು. ವಿಷ್ಣುವು ಈ ಅಮೃತ ಕಲಶವನ್ನು ಕೈಗೆ ತೆಗೆದುಕೊಂಡು ನೋಡ ಸಂತೋಷಪಡುವನು. ಆಗ ಅವನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿ ಆ ಕಲಶದಲ್ಲಿ ಬಿದ್ದು ಒಂದು ಸಣ್ಣ ಗಿಡ ಹುಟ್ಟಿತು. ಇದಕ್ಕೂ ತುಲಸಿ (ಹೋಲಿಕೆ ಸಮಾನ) ಬೇರೊಂದು ಇಲ್ಲವೆಂದು ತಿಳಿದು ವಿಷ್ಣುವು ತುಲಸಿಯೆಂದು ಈ ಗಿಡಕ್ಕೆ ಹೆಸರಿಟ್ಟು, ಲಕ್ಷ್ಮಿಯೊಂದಿಗೆ ತುಲಸಿಯನ್ನು ಮದುವೆಯಾದನು.

ಹಿಂದೆ ಜಲಂಧರನೆಂಬ ರಾಕ್ಷಸನೊಬ್ಬನಿದ್ದ. ಅವನ ಮಡದಿ ಕಾಲನೇಮಿಯ ಮಗಳಾದ ವೃಂದೆ. ಈಕೆ ಪತಿವ್ರತಾಶಿರೋಮಣಿ. ವೃಂದೆಯ ಪಾತಿವ್ರತ್ಯಬಲದಿಂದ ಜಲಂಧರನಿಗೆ ಎಲ್ಲ'ಯುದ್ಧಗಳಲ್ಲಿ ಜಯಲಭಿಸುತ್ತಿತ್ತು, ವಿಜಯೋನ್ಮತ್ತನಾದ ಜಲಂಧರನ ವಕ್ರದೃಷ್ಟಿ ದೇವತೆಗಳ ಮೇಲೆ ಬಿದ್ದು ಅವರೆಲ್ಲರನ್ನು ಸೋಲಿಸುತ್ತಾ ಬಂದನು. ದೇವತೆಗಳು ನಿರ್ವಾಹವಿಲ್ಲದೆ ವಿಷ್ಣುವಿನ ಮೊರೆ ಹೊಕ್ಕರು. ವೃಂದೆಯ ಪಾತಿವ್ರತ್ಯ ಪ್ರಭಾವವನ್ನು ಅರಿತ ವಿಷ್ಣುವು ಅವಳ ಪಾತಿವ್ರತ್ಯವನ್ನು ಭಂಗಗೊಳಿಸಲು ಕಪಟೋಪಾಯವನ್ನು ಹೂಡಿದನು. ಜಲಂಧರನು ದೇವತೆಗಳೊಂದಿಗೆ ಯುದ್ಧಮಾಡುತ್ತಿದ್ದಾಗ, ವಿಷ್ಣುವು ಜಲಂಧರನ ವೇಷ ಧರಿಸಿ, ಬೇರ್ಪಟ್ಟ ರುಂಡಮುಂಡಗಳ ವಿಕೃತರೂಪದಲ್ಲಿ ವೃಂದೆಯ ಎದುರಿಗೆ ಕಾಣಿಸಿಕೊಂಡನು. ವೃಂದೆಯು ಪತಿಯನ್ನು ಕಳೆದುಕೊಂಡೆನೆಂದು ಶೋಕಿಸುವಳು. ಅಷ್ಟರಲ್ಲಿ ವಿಷ್ಣುವು ಸಾಧುವೇಷದಿಂದ ಪುನಃ ಕಾಣಿಸಿಕೊಂಡು ಸಂಜೀವನೀ ವಿದ್ಯೆಯಿಂದ ಆ ಬೇರ್ಪಟ್ಟ ರುಂಡ ಮುಂಡಗಳನ್ನು ಕೂಡಿಸಿದನು. ವೃಂದೆಯು ಸಂತೋಷದಿಂದ ಈಗ ಪತಿಯನ್ನಪ್ಪಿದಳು, ಆದರೆ ಆತನು ಅವಳ ಪತಿಯಾಗಿರಲಿಲ್ಲ, ಹೀಗೆ ಮೋಸದಿಂದ ಅವಳ ಪಾತಿವ್ರತ್ಯ ಭಂಗವಾಯಿತು, ಹೆಂಡತಿಯ ಪಾತಿವ್ರತ್ಯ ಬಲದಿಂದ ಜಯಶಾಲಿಯಾಗುತ್ತಿದ್ದ ಜಲಂಧರನಿಗೆ ಈಗ ಅವಳ ಪಾತಿವ್ರತ್ಯ ಭಂಗದಿಂದ ಸೋಲುಂಟಾಗಿ ಯುದ್ಧದಲ್ಲಿ ಮಡಿದನು. ತಾನು ಮೋಸಹೋದೆನೆಂದು ತಿಳಿದ ವೃಂದೆಯು ವಿಷ್ಣುವಿಗೆ 'ನಿನಗೆ ಪತ್ನೀ ವಿಯೋಗವಾಗಲಿ' ಎಂದು ಶಪಿಸಿ ಚಿತೆಯೇರುವಳು.(ಅಂತೆಯೇ ರಾಮಾವತಾರದಲ್ಲಿ ವಿಷ್ಣುವಿಗೆ ಸೀತಾವಿಯೋಗವಾಯಿತು) ಪಾರ್ವತಿಯು ವೃಂದೆಗಾಗಿ ಚಿತೆಯ ಸುತ್ತಲೂ ವೃಂದಾವನವನ್ನು ನಿರ್ಮಿಸುವಳು, ಅಲ್ಲಿ ಬೆಳೆದ ತುಲಸಿಯನ್ನು ವಿಷ್ಣುವು ತೆಗೆದುಕೊಂಡು ಸಂತೋಷದಿಂದ ಕೊರಳಲ್ಲಿ ಧರಿಸುವನು. ವೃಂದೆಯ ಪಾತಿವ್ರತ್ಯವನ್ನು ಮೆಚ್ಚಿ ಕೊಳ್ಳುವನು, ವೃಂದೆಯ ವನ ವೃಂದಾವನವಾಯಿತು.

ಮತ್ತೊಂದು ಕಥೆ ಹೀಗಿದೆ. ಒಮ್ಮೆ ಜಲಂಧರನೆಂಬ ರಾಕ್ಷಸನು ಶಿವನರೂಪ ಧರಿಸಿ ಪಾರ್ವತಿಯನ್ನು ಮಾನಭಂಗಪಡಿಸಬೇಕೆಂದು ಯೋಚಿಸಿದ. ಜಲಂಧರನ ಈ ದುರಾಲೋಚನೆಯನ್ನು ಅರಿತ ಪಾರ್ವತಿಯು ವಿಷ್ಣುವಿನ ಬಳಿಹೋಗಿ 'ನೀನು ವೃಂದೆಯ ಪಾತಿವ್ರತ್ಯವನ್ನು ಕೆಡಿಸು' ಎಂದು ಹೇಳುವಳು. ವಿಷ್ಣುವು ಜಲಂಧರನ ವೇಷದಲ್ಲಿ ಹೋಗಿ ವೃಂದೆಯೊಂದಿಗೆ ಕ್ರೀಡಿಸುವನು. ನಂತರ ವಿಷ್ಣುವಿನ ಮೋಸತಿಳಿದ ವೃಂದೆಯು

'ನೀನು ನನ್ನನ್ನು ಮೋಸಗೊಳಿಸಿದ್ದರಿಂದ ಭಾರ್ಯಾ ವಿಯೋಗವನ್ನು ಅನುಭವಿಸು' ಎಂದು ಶಾಪವಿತ್ತು, ಮಲಿನವಾದ ದೇಹವನ್ನು ಹೊತ್ತು ಪ್ರಯೋಜನವಿಲ್ಲವೆಂದು ತಿಳಿದು ಚಿತೆಯೇರುವಳು.

ಇದು ತುಲಸಿಗೂ–ವಿಷ್ಣುವಿಗೂ ಇರುವ ಸಂಬಂಧ. ವೈಷ್ಣವರು ಹಾಗೂ ಸ್ಮಾರ್ತರೇ ಮೊದಲಾದ ಭಕ್ತರು ಕಾರ್ತೀಕ ಶುದ್ಧ ದ್ವಾದಶಿಯಂದು (ಉತ್ಥಾನ ದ್ವಾದಶಿ) ತುಲಸಿ ವೃಂದಾವನಕ್ಕೆ ವಿಶೇಷ ಪೂಜೆ ಸಲ್ಲಿಸುವರು. ತುಲಸಿಯ ದರ್ಶನದಿಂದ ಪಾಪಸಂಹಾರವಾಗುತ್ತದೆಂದು, ಸ್ಪರ್ಶದಿಂದ ಪವಿತ್ರತೆ ಬರುತ್ತದೆಂದು, ಸಸಿನೆಡುವುದರಿಂದ ಮಹಾವಿಷ್ಣುವಿನ ಸಾನ್ನಿಧ್ಯ ಲಭಿಸುವುದೆಂದು, ತುಲಸಿಯಿಂದ ವಿಷ್ಣುವನ್ನು ಅರ್ಚಿಸಿದರೆ ಮೋಕ್ಷಪ್ರಾಪ್ತಿಯಾಗುವುದೆಂದು ವೈಷ್ಣವರು ಭಾವಿಸುವರು.

ತುಲಸಿ ಸಸ್ಯದಿಂದ ಹಲವಾರು ಲೌಕಿಕ ಪ್ರಯೋಜನಗಳೂ ಉಂಟು. ಆಹಾರದ ಪಚನ ಕ್ರಿಯೆಗೆ ಸಹಕಾರಿ. ಇದನ್ನು ಸೇವಿಸುವುದರಿಂದ ಸಂತಾನಪ್ರಾಪ್ತಿಯಾಗುತ್ತದೆಂದು, ಅಂಟುರೋಗಗಳ ಬಾಧೆಯಿರುವುದಿಲ್ಲವೆಂದು, ಕೆಮ್ಮು, ನೆಗಡಿ, ಜ್ವರ, ಬಿಕ್ಕಳಿಕೆ, ಪಾರ್ಶ್ವಶೂಲೆ, ಚರ್ಮವ್ಯಾಧಿ ಮುಂತಾದ ಖಾಯಿಲೆಗಳನ್ನು ದೂರಮಾಡುತ್ತದೆಂದು, ತುಲಸಿ ಇರುವಲ್ಲಿ ಸೊಳ್ಳೆಗಳಿರುವುದಿಲ್ಲವೆಂದು ಬಲ್ಲವರು ಹಾಗೂ ಅನುಭವಿಗಳು ಹೇಳುತ್ತಾರೆ. ಕೆಲವರು, ಹಾವು ಮತ್ತು ಚೇಳು ಕಡಿದವರಿಗೆ ತುಲಸಿದಳದ ರಸದಿಂದ ಚಿಕಿತ್ಸೆ ಮಾಡುವರು.

—

(11 ನೇ ಪುಟದಿಂದ)

"ಧುರ್ಯೈ ರಪಿ ಮಾಧುರ್ಯೈಃ ದ್ರಾಕ್ಷಾ
ಕ್ಷೀರೇಕ್ಷು ಮಾಕ್ಷಿಕಾಸುಧಾನಾಂ |
ವಂದ್ಯೈವ ಮಾಧುರೀಯಂ ಪಂಡಿತ
ರಾಜಸ್ಯ ಕವಿತಾಯಾಃ ||"

ದ್ರಾಕ್ಷಿಯಲ್ಲೂ, ಕ್ಷೀರದಲ್ಲೂ, ಇಕ್ಷುರಸ, ಮಕರಂದ, ಅಮೃತ, – ಈ ಎಲ್ಲಾ ವಸ್ತುಗಳಲ್ಲೂ ಅಡಗಿರುವ ರುಚಿಯು ಪಂಡಿತರಾಜನ ಕವಿತೆಯಲ್ಲಿ ಅಡಕವಾಗಿದೆ. ಆ ಅನಿರ್ವಚನೀಯವಾದ ರುಚಿಯು ನಿಜವಾಗಿಯೂ ಪ್ರಶಂಸನೀಯವೇ! ಎಂದು ತನ್ನ ಕಾವ್ಯದ ಹಿರಿಮೆಯನ್ನು ಧೈರ್ಯವಾಗಿ ಹೊಗಳಿಕೊಂಡಿರುತ್ತಾನೆ.

ಆ ಮಹಾನುಭಾವನಾದ ಜಗನ್ನಾಥ ಪಂಡಿತರಾಜನ ಪಾಂಡಿತ್ಯ ಧೈರ್ಯ ಸಾಹಸ ಮನೋಭಾವವು ಅನ್ಯಾದೃಶವಾದುದು.

ಅವನ ಕೃತಿಗಳನ್ನು ಅಧ್ಯಯನಮಾಡಿ ಆ ಅಪೂರ್ವವಾದ ಮಾಧುರ್ಯವನ್ನು ಸರ್ವರೂ ಆಸ್ವಾದಿಸ ಬೇಕಾದುದು ಅಗತ್ಯ. ★


## ಪ್ರಕಟನ ಶಾಖೆ

**ಶ್ರೀ ವೆಂಕಟೇಶ ಸಚಿತ್ರ ಸುಪ್ರಭಾತ** — **ಬೆಲೆ: ೧೦-೦೦**
(ತ್ರಿವರ್ಣಚಿತ್ರಸಹಿತ ಸ್ತೋತ್ರ ಪ್ರಪತ್ತಿ, ಮಂಗಳಾಶಾಸನಗಳ ವಿವರಣೆ)

**ಕಿಶೋರ ಭಾರತ - ಮ್ಯೆ. ನ. ನಾಗರಾಜ** — **ರಿಯಾಯಿತಿ ಬೆಲೆ: ೪-೦೦**

**ಶ್ರೀಮದ್ಭಗವದ್ಗೀತಾ** (ಸರಳ ಕನ್ನಡಾನುವಾದದೊಂದಿಗೆ) — **ರಿಯಾಯಿತಿ ಬೆಲೆ: ೨-೦೦**

**ಶ್ರೀನಿವಾಸನ ಹಾಡುಗಳು - ಶ್ರೀ ಪುರಂದರದಾಸರು** — **ಬೆಲೆ: ೩-೨೫**

**ಆಚಾರಗಳು ಆಡಂಬರಗಳು** — **ಬೆಲೆ: ೦-೪೦**

ದಾಸಸಾಹಿತ್ಯ ಪ್ರಾಜೆಕ್ಟ್ ಮಕ್ಕಳ ವಿಭಾಗ :

**ಭಕ್ತ ಶ್ರೀ ಪುರಂದರದಾಸರು - ಕೆ. ಅಪ್ಪಣಾಚಾರ್ಯ** — **ಬೆಲೆ: ೦-೫೦**

**ಶ್ರೀ ವ್ಯಾಸರಾಯರು - ಕೆ. ಅಪ್ಪಣಾಚಾರ್ಯ** — **ಬೆಲೆ: ೦-೪೦**

ಅಂಚೆ ವೆಚ್ಚ ಪ್ರತ್ಯೇಕ.

ವಿವರಗಳಿಗೆ:
**ಪಬ್ಲಿಕೇಷನ್ ಸೆಕ್ಷನ್,**
**ಟಿ. ಟಿ. ಡಿ. ತಿರುಪತಿ.**

"ಮಾತೃ ದೇವೋಭವ" ಎಂದು ವೇದಗಳು ಸಾರುತ್ತವೆ. ವೇದಗಳನ್ನೋದುವುದಿರಲಿ, ಅಕ್ಷರ ಜ್ಞಾನ ಸಹ ಇಲ್ಲದಿದ್ದರೂ ಜನಪದರು ಅನುಭವ ದಿಂದ ತಾಯಿ ದೇವರೆಂಬುದನ್ನರಿತು ಆಕೆಗೆ ಪೂಜ್ಯ ಸ್ಥಾನ ನೀಡುತ್ತಾರೆ.

ಗಂಡ, ಮಕ್ಕಳೊಂದಿಗೆ ಚೊಕ್ಕವಾಗಿ ಸಂಸಾರ ಮಾಡುತ್ತ ಸುಖಸಂತೋಷಗಳಿಂದಿದ್ದರೂ ಹೆಣ್ಣಿನ ಮನ ತನ್ನ ತಾಯಿಯನ್ನು ಸದಾ ಜ್ಞಾಪಿಸಿಕೊಳ್ಳುತ್ತ ಹಿಂದಿನ ನೆನಪುಗಳನ್ನು ಮೆಲುಕು ಹಾಕುತ್ತಿರುತ್ತದೆ ತಾಯಿ ತನಗೆ ಮಾಡುತ್ತಿದ್ದ ಊಟ ಉಪಚಾರಗಳು, ತನ್ನ ಶ್ರೇಯಸ್ಸಿಗಾಗಿ ಆಕೆ ಹಗಲಿರುಳು ವಹಿಸುತ್ತಿದ್ದ ಕಾಳಜಿ, ಆಕೆಯ ಮಮತೆಯ ಮಡಿಲಲ್ಲಿ ತಾನು ಪಡೆದ ಸುಖಸಂತೋಷಗಳನ್ನು ಸ್ಮರಿಸಿ ತೌರಿಗೆ ಹೋಗಿಬರಲು ಹಾತೊರೆಯುತ್ತಾಳೆ, ಚಿಕ್ಕಂದಿನಿಂದ ಸಾಕಿಸಲಹಿದ ತಾಯಿಯ ಬಗ್ಗೆ ಆಕೆಯ ಹೃದಯದಲ್ಲಿ ಮೂಡುವ ವಾತ್ಸಲ್ಯಭಾವ ಬಾಯಿಂದ ಹಾಡಿನ ಹೊನಲಾಗಿ ಹೊರಹೊಮ್ಮುತ್ತದೆ.

"ಕಾಶೀಗಿ ಹೋಗಲಕ ಏಸೊಂದು ದಿನಬೇಕ
ತಾಸೊತ್ತಿನ್ಹಾದಿ ತವರೂರ। ಮನಿಯಾಗ
ಕಾಸಿ ಕುಂತಾಳ ಹಡದವ್ವ"

ಎಂದು ಹಾಡುವಲ್ಲಿ ತಾಯಿಯಸ್ಥಾನ ಕಾಶಿ ವಿಶ್ವನಾಥನಿಗಿಂತ ಮಿಗಿಲಾದದ್ದೆಂಬುದು ಅರಿವಾಗುತ್ತದೆ. ಕಾಣದ ದೈವವನ್ನರಸಿಕೊಂಡು ದೂರದ ಕಾಶಿಗೆ ಹೋಗಿ ಬವಣೆಪಡುವ ಬದಲು ನೆರೆಯಲ್ಲಿರುವ ತವರೂರಿಗೆ ಹೋಗಿ ಪ್ರತ್ಯಕ್ಷ ದೈವವಾದ ತಾಯಮಡಿಲಲ್ಲಿ ತಲೆಯಿರಿಸಿ ನೆಮ್ಮದಿಪಡೆಯ ಬಯಸುವ ಮನೋಭಾವ ಶ್ಲಾಘ್ಯವಾದದ್ದು.

"ಯಾರಿದ್ದರೇನು ನನ್ನ ತಾಯವ್ವನ್ಹೋಲ್ಯಾರ
ಸಾವಿರಕೊಳ್ಳಿ ಒಲಿಯಾಗ। ಉರಿದರು
ಜ್ಯೋತಿ ನಿನ್ಯಾರು ಹೋಲ್ಯಾರ।"

ತಾಯಿಯಸ್ಥಾನ ಅನನ್ಯವಾದದ್ದು. ಅನನ್ನು ಮತ್ತಾರೂ ತುಂಬಲಾರರು– ಎಂಬುದು ಈ ತ್ರಿಪದಿಯಲ್ಲಿ ಸಹಜಸುಂದರವಾಗಿ ಮೂಡಿಬಂದಿದೆ. "ಬೇರೆಯವರಿಂದ ಮಗಳಿಗೆ ದೊರೆಯುವ ಪ್ರೀತಿಯಲ್ಲಿ ಬೆಳಕಿಗಿಂತ ಉರಿಹೆಚ್ಚು – ಕೊಳ್ಳಿಯಂತೆ. ಆದರೆ ತಾಯಿಯ ರುಚಿರಶಾಂತಪ್ರೀತಿ ನಂದಾದೀಪದಂತೆ" ಅನ್ನುತ್ತಾರೆ ಡಾ. ಜಿ. ಎಸ್. ಶಿವರುದ್ರಪ್ಪನವರು. ಒಲೆಯಲ್ಲಿನ ಕೊಳ್ಳಿ ಕೇವಲ ಲೌಕಿಕ ಪ್ರಯೋಜನಗಳಿಗಾದರೆ, ನಂದಾದೀಪದ ಜ್ಯೋತಿ ದಾರಿದೀಪವಾಗಿ ಪಾರಮಾರ್ಥಿಕ ವಿಷಯದ ಕಡೆಗೆ ಬೆಳಕು ಬೀರುತ್ತದೆ. ಇಹಪರ ಸುಖ ಶಾಂತಿ ಪಡೆಯುವಲ್ಲಿ ತಾಯಿಯೆಂಬ ದಿವ್ಯಜ್ಯೋತಿಯ ಮಾರ್ಗದರ್ಶನ ಮಹತ್ತ್ವದ್ದು. ಗಂಗಾದೇವಿಯಂತೆ ಪವಿತ್ರಳಾದ ತಾಯಿಯನ್ನು ನೆನೆಸಿಕೊಂಡರೆ 'ಮಾಸಿದ ತಲೆಯೂ ಮಡಿಯಾಗುತ್ತದಂತೆ'. ಅಂತರಂಗದ ಮಾಲಿನ್ಯವನ್ನಷ್ಟೇ ಅಲ್ಲದೆ ಬಾಹ್ಯದ ಮಾಲಿನ್ಯವನ್ನೂ ತೊಲಗಿಸುತ್ತದೆ– ತಾಯಿಯ ಪುಣ್ಯಸ್ಮರಣೆ.

"ಕಣ್ಣೆಂಜಲ ಕಾಡೀಗಿ ಬಾಯೆಂಜಲ ವೀಳ್ಯವ
ಯಾರೆಂಜಲುಂಡಿ ನನ ಮನವೆ। ಹಡೆದೌವ್ನ
ಬಾಯೆಂಜಲುಂಡು ಬೆಳೆದೇನ।"

ತಾನು ಉಂಡು, ಉಟ್ಟು ಯುವತಿಯಾಗಿ, ಪತಿ ಮಂದಿರವನ್ನು ಬೆಳಗುವುದಕ್ಕೆ ಸಾಧ್ಯವಾದದ್ದು ತನ್ನ ತಾಯಿಯ ಆರೈಕೆಯ ಫಲ ಎಂಬುದನ್ನು ಹೆಣ್ಣು ಚೆನ್ನಾಗಿ ಬಲ್ಲಳು. ತನ್ನ ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಸಿಂಗರಿಸಿಕೊಳ್ಳುವಾಗ ತಾಯಿ ತನ್ನ ಪ್ರತಿರೂಪದಂತಿರುವ ಮಗಳಿಗೂ ಕಾಡಿಗೆ ಹಚ್ಚಿ ಸಂತೋಷಪಡುತ್ತಾಳೆ. ತಾನು ಉಣ್ಣುವಾಗ ಬಳಿಯಲ್ಲಿರುವ ಮಗಳ ಬಾಯಿಗೂ ತುತ್ತನ್ನಿಡುತ್ತಾಳೆ. ಹೀಗೆ ತಾಯಿ ನೀಡಿದ ಕೈತುತ್ತಿನ ಸವಿಯನ್ನುಂಡು ಬೆಳೆದ ಹೆಣ್ಣು ಕೃತಜ್ಞತೆಯಿಂದ ತಾಯಿಯನ್ನು ಸ್ಮರಿಸಿಕೊಳ್ಳುತ್ತಾಳೆ

---

**ಶ್ರೀಮತಿ ಬಿ.ಎಸ್. ಸರೋಜ** ಎಂ.ಎ.

---

"ತಾಯಿಯ ಮನಿಗ್ಹೋಗಿ ಬಾಯಿಬೇಡಿದ್ದುಂಡೆ
ಸ್ಯಾಂವಿಗಿ ಉಂಡೆ ಸೈದಾನ ಹಡೆದವ್ವ
ಮಾರಿ ನೋಡಿ ಉಂಡೇ ಮೊಲೆವಾಲ"

ಅತ್ತೆಯಮನೆಯಲ್ಲಿ ಬೇಕಾದ್ದನ್ನು ಕೇಳಿ ಪಡೆಯಲು ಸಂಕೋಚಪಡುವ ಹೆಣ್ಣು ತಾಯಿಯ ಮುಂದೆ ನಿಸ್ಸಂಕೋಚದಿಂದ ತನ್ನ ಬಯಕೆಗಳನ್ನು ಹೇಳಿಕೊಳ್ಳುತ್ತಾಳೆ. ನಾಲಿಗೆ ರುಚಿನೋಡಬಯಸಿದ್ದನ್ನೆಲ್ಲ ತಾಯ ಕೈಯಿಂದ ಮಾಡಿಸಿಕೊಂಡು ಉಂಡು ನಲಿಯುತ್ತಾಳೆ. ಆಕೆಯ ತೋಳತೆಕ್ಕೆಯಲ್ಲಿ ಹಸುಗೂಸಾಗಿ ನಲಿಯುತ್ತಾಳೆ.

"ಬ್ಯಾಸಗಿ ದಿವಸಕೆ ಬೇವಿನ ಮರತಂಪ
ಭೀಮರತಿಯೆಂಬ ಹೊಳೆತಂಪ। ಹಡದವ್ವ।
ನೀ ತಂಪ ನನ್ನ ತವರೀಗಿ।"

ಕಡುಬೇಸಗೆಯ ಬೇಗೆಯಲ್ಲಿ ಬೇಯುವಾಗ ಬೇವಿನ ಮರದ ನೆರಳೂ ಅಲ್ಲಿ ಬೀಸುವ ಹಿತಕರವಾದ ಗಾಳಿಯೂ ಹೊಳೆಯ ತಿಳಿನೀರೂ ದೇಹಕ್ಕೆ ಹೇಗೆ ತಂಪನ್ನೆರೆಯುತ್ತವೆಯೋ ಹಾಗೆಯೇ ಗಂಡನಮನೆಯಲ್ಲಿ ಅತ್ತೆ, ನಾದಿನಿ, ನೆಗಣ್ಣಿಯರ ಸಹವಾಸದಲ್ಲಿ ನುಗ್ಗಾಗಿ, ಹಲವು ಕೆಲಸಗಳ ಜಂಜಡದಿಂದ ನುಗ್ಗಾದ ಹೆಣ್ಣು ತೌರಿಗೆ ಬಂದಾಗ

# ಜ್ಯೋತಿ ನಿನ್ಯಾರು ಹೋಲ್ಯಾರ

ತಾಯಿ ಆದರಾತಿಥ್ಯದಿಂದ ಬೆಂದಜೀವಕ್ಕೆ ತಂಪನ್ನೆರೆಯುತ್ತಾಳೆ. ಬೇವಿನಸೊಪ್ಪು ಕಹಿಯಾಗಿದ್ದರೂ ಔಷಧಗುಣವನ್ನು ಹೊಂದಿರುವಂತೆ, ತಾಯಮಾತು ಕೆಲವೊಮ್ಮೆ 'ಅಧರಕ್ಕೆ ಕಹಿಯಾಗಿದ್ದರೂ ಉದರಕ್ಕೆ ಸಿಹಿ' ಯಾಗಿರುತ್ತದೆ.

ತಾಯಿಯೊಡನೆ ಯಾವುದಾದರೂ ವ್ಯಾಜದಿಂದ ಒಮ್ಮೆ ಜಗಳವಾಡಿದರೂ ಮರುಕ್ಷಣಕ್ಕೆ ಅವರಲ್ಲಿ ರಾಜಿಯಾಗುವುದು

"ತಾಯಿಮಕ್ಕಳ ಜಗಳ ನ್ಯಾಯ ಮಾಡುವರ್ಯಾರ
ವಾಲೀಗಿ ಮುತ್ತ ವಜನೇನೆ। ಹಡದವ್ವ।
ನಾ ಆಡಿದ ಮಾತು ನಿಜವೇನ।"

ಎಂದು ತಾಯಿಯನ್ನು ಸಮಾಧಾನಮಾಡ ಹೊರಡುತ್ತಾಳೆ ಯಾವುದೋ ಕ್ಷಣದಲ್ಲಿ ತಾನಾಡಿದ ಮಾತನ್ನು ಗಣನೆಗೆ ತೆಗೆದುಕೊಂಡು ಬೇಸರಿಸಬಾರದೆಂದು ಬೇಡುತ್ತಾಳೆ. ತಾಯ ಸಮಾಧಾನಕ್ಕಾಗಿ ಆಕೆಯ ಕಾಲಿಗೆರಗುತ್ತಾಳೆ.

"ನಮ್ಮವ್ವ ನನತಾಯಿ ಹಣ್ಣಹಾಗಲಕಾಯಿ
ಸುಮ್ಮನೆ ಬೇದಗರತೀಗಿ। ಹಡೆದವ್ವ
ಉಣ್ಲೇಳ ಕಾಲ ಹಿಡಿದೇನು"

ಎಂದು ತಾಯ ಕಾಲು ಹಿಡಿದು, ಆಕೆಯ ಕ್ಷಮೆ ಯಾಚಿಸುತ್ತಾಳೆ. ತಾಯ ಮನಕರಗಿ ಮಗಳನ್ನು ಬಾಚಿತಬ್ಬಿ ಆನಂದಾಶ್ರುಗರೆಯುತ್ತಾಳೆ. ಹೀಗೆ



ಆಕಸ್ಮಿಕವಾಗಿ ಉಂಟಾಗುವ ಕಹಿಪ್ರಸಂಗವನ್ನು ಪರಸ್ಪರ ವಿಶಾಲ ಮನೋಭಾವದಿಂದ ಕೊನೆ ಗಾಣಿಸಿ ಸಂತಸದಿಂದ ನಲಿಯುತ್ತಾರೆ. ತನ್ನ ಮಗಳೊಡನೆ ಸಂತೆಗೆ ಬಂದ ತಾಯಿ, ಅಲ್ಲಿ ನೆರೆದಿರುವ ಜನಸಂದಣಿಯನ್ನು ನೋಡಿ ತನ್ನೊಡನೆ ಮಗಳು ಬಂದಿರುವಳೆಂಬುದನ್ನೂ ಮರೆತು ಅವರ ನಡೆನುಡಿಗಳನ್ನು ನೋಡುವುದರಲ್ಲಿ ತಲ್ಲೀನಳಾಗುತ್ತಾಳೆ. ಆದರೆ ಅಲ್ಲಿ ಮಾರಲು ತಂದಿರುವ ಕಂಪನ್ನು ಬೀರುವ ಮಲ್ಲಿಗೆದಂಡೆಯನ್ನು ನೋಡಿ, ಅದನ್ನು ಮುಡಿಸಲು ತನ್ನ ಮಗಳನ್ನು ಹುಡುಕುತ್ತಾಳೆ. ಇಂತಹ ತಾಯ ಸಹವಾಸವನ್ನು ಶಾಶ್ವತವಾಗಿ ಪಡೆಯಬಯಸುವ ಮಗಳು ಅದಕ್ಕಾಗಿ ಹಂಚಿಕೆ ಹೂಡುತ್ತಾಳೆ.

"ಹೆಣ್ಣು ಹಡೆಯಲಿ ಬೇಕು ತಮ್ಮನಿಗೆ ಕೊಡ
ಬೇಕು
ಇರಬೇಕು ಅವ್ವ ಮನಿಯಾಗ। ನಮ್ಮಂತೆ
ಮೊಮ್ಮಗಳು ಎಂದು ಸಲುವ್ಯಾಳು।"

ಹೆಣ್ಣು ಎಂದಿದ್ದರೂ ಬೇರೆಯವರ ಸ್ವತ್ತು. ಮದುವೆಯಾದ ಹೆಣ್ಣು ಗಂಡನ ಮನೆಗೆ ಹೋಗುವಾಗ, ಪತಿಯ ಮನೆಬೆಳಗ ಹೊರಟಿರುವ ಮಗಳನ್ನು ನೋಡಿ ತಾಯಿಗೆ ಸಂತಸದೊಡನೆ ತಾನು ಸಾಕಿ ಸಲಹಿದ ಮಗಳನ್ನು ಅಗಲಬೇಕೆಂಬ ಸಂಕಟ ಹೆಚ್ಚಾಗುತ್ತದೆ. ಇಷ್ಟುದಿನ ತಾನು ಮುದ್ದಾಗಿ ಸಾಕಿದ ಮಗಳನ್ನು ಗಂಡನ ಮನೆಯವರು ಹೇಗೆ ನಡೆಸಿಕೊಳ್ಳುತ್ತಾರೋ ಎಂಬ ಯೋಚನೆಯೂ ಇದರೊಂದಿಗೆ ಸೇರುತ್ತದೆ.

"ಒಂಬತ್ತು ತಿಂಗಳು ನಿನ್ನ ತುಂಬಿಕೊಂಡು
ತಿರುಗೇನ
ಹಂಬಲಿಸಿ ನಿನ್ನ ಹಡದೇನ। ಚಿತ್ತಾರದ
ಗೊಂಬಿ ನಿನಗೊಪ್ಪಿಸಿ ಕೊಡಲ್ಹ್ಯಾಂಗ"

ಎಂದು ತಾಯ ಜೀವ ಅಗಲಿಕೆಯ ನೋವಿಂದ ಬೇಯುತ್ತದೆ. ಹೆಣ್ಣುಮಕ್ಕಳನ್ನು ಹೆತ್ತರೆ ತಾನೇ ಈ ದುಃಖ? ಅದಕ್ಕಾಗಿ ಹೆಣ್ಣುಮಕ್ಕಳನ್ನೇ ಹಡೆಯಬಾರದು ಎನಿಸುತ್ತದೆ ಆ ಕ್ಷಣದಲ್ಲಿ.

ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗೆ ಕೊಡ
ಬ್ಯಾಡ
ಹೆಣ್ಣು ಹೋಗಾಗ ಅಳಬ್ಯಾಡ। ಹಡೆದವ್ವ
ಸಿಟ್ಟಾಗಿ ಶಿವಗ ಬೈಬ್ಯಾಡ" ಅನ್ನುತ್ತಾಳೆ.

"ಹುಟ್ಟಿದ ಮನೆಯಿಂದ ಮೆಟ್ಟಿಲನಿಳಿವಾಗ
ಹೊಟ್ಟೆಗೆ ಸಿಡಿಲು ಬಡಿದಂತೆ। ಹೆತ್ತವ್ವಗೆ।
ಕಣ್ಣನೀರೆದ್ದು ಹೊಳೆಯಾದೊ।"

ಮಗಳನ್ನು ಅಗಲಬೇಕೆಂದು ತಾಯಿ ಕಣ್ಣೀರ ಕೋಡಿ ಹರಿಸುತ್ತಾಳೆ. ತನ್ನ ದುಃಖವನ್ನು ನುಂಗಿಕೊಂಡು ಮಗಳೇ ತಾಯಿಗೆ ಸಮಾಧಾನ ಹೇಳಬೇಕಾಗುತ್ತದೆ.

"ಅತ್ತರೆ ಕರೆದರೆ ಹತ್ತಿರಿದ್ದೇವೇನೆ
ಹುಚ್ಚೇನೆ ಅವ್ವ ಮರುಳೇನೆ। ಗೋಡೆಯ
ಚಿತ್ತಾರ ನೋಡಿ ಮರೆಯವ್ವ"

ತಾಯಿ ಅತ್ತರೆ ಸಮಾಧಾನ ಪಡಿಸುವುದಕ್ಕೆ ತಾನು ಹತ್ತಿರದಲ್ಲಿರುವುದಿಲ್ಲವಾದ್ದರಿಂದ ಗೋಡೆಯ ಮೇಲೆ ಬರೆದಿರುವ ತನ್ನ ಪ್ರತಿರೂಪವನ್ನು ನೋಡಿ ಸಮಾಧಾನಮಾಡಿಕೊಳ್ಳಬೇಕೆಂದೂ, ತನಗಾಗಿ ಹಂಬಲಿಸಿ ಅಳಬಾರದೆಂದೂ ಕೇಳಿಕೊಳ್ಳುತ್ತಾಳೆ. ತನ್ನ ಮಧುರಸ್ಮೃತಿಯನ್ನು ತಾಯ ಚಿತ್ತಭಿತ್ತಿಯಲ್ಲಿ ಪಡಿಮೂಡಿಸುವ ಮಗಳ ಹೃದಯವಂತಿಕೆ ಗೋಚರಿಸುತ್ತದೆ.

"ತಾವರೆಯ ಗಿಡಹುಟ್ಟಿ ದೇವರಿಗೆ ನೆರಳಾದೆ
ನಾ ಹುಟ್ಟಿ ಮನೆಗೆ ಎರವಾದೆ। ಹಡೆದವ್ವ।
ನೀ ಕೊಟ್ಟ ಮನೆಗೆ ಹೆಸರಾದೆ।"

ತಾವರೆಯು ಸರೋವರದಲ್ಲಿ ಹುಟ್ಟಿ ಶಿವಲಿಂಗದ ತಲೆಯೇರಿ ದೇವರಿಗೆ ನೆರಳಾಗುವಂತೆ ತಾನು ತಾಯಮನೆಯಲ್ಲಿ ಹುಟ್ಟಿ, ಬೆಳೆದು ದೊಡ್ಡವಳಾದಮೇಲೆ ಗಂಡನಮನೆಯನ್ನು ಬೆಳಗಹೊರಟಿರುವುದಾಗಿ ತಿಳಿಸುತ್ತಾಳೆ.

"ಅತ್ತಿ ಉತ್ತಮಳೆನ್ನು ಮಾವ ಮಲ್ಲಿಗೆ ಎನ್ನು
ಮುತ್ತಿನ ಸರವೆನ್ನು ಪತಿಯ। ನನ ಮಗಳೆ
ಮಾತಿನಾಗುಂಟು ಸರುವೆಲ್ಲ।"

ಎಂದು ತಾಯಿ ಸವಿನುಡಿಯನ್ನಾಡಿ ಪತಿಯ ಮನೆಯವರೆಲ್ಲರ ಮನವನ್ನು ಗೆದ್ದು ಸುಖಿಯಾಗುವಂತೆ ಹರಸುತ್ತಾಳೆ. ತಾಯಿ ತನ್ನ ಹೃದಯ ಶ್ರೀಮಂತಿಕೆಯಿಂದ ಮಕ್ಕಳಮನದಲ್ಲಿ ಅಚ್ಚಳಿಯದೆ ನಿಲ್ಲುತ್ತಾಳೆ. ★


# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, | 5–30 ರಿಂದ 9–30 ವರೆಗೆ |
| ಅಭಿಷೇಕ | ,, | 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟೆ | ,, | 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, | 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟೆ | ,, | 11–30 ರಿಂದ 11–45 ವರೆಗೆ |
| ಸರ್ವದರ್ಶನ | | 11–45 ರಿಂದ ಮಧ್ಯಾಹ್ನ 4–00 ವರೆಗೆ |
| ಅಭಿಷೇಕ (ಆರ್ಜಿತ) | ಮಧ್ಯಾಹ್ನ | 4–00 ರಿಂದ 4–30 ವರೆಗೆ |
| ಅರ್ಚನೆ (ಆರ್ಜಿತ) | ,, | 4–30 ರಿಂದ 5–30 ವರೆಗೆ |
| ರಾತ್ರಿ ಘಂಟೆ | ಸಂಜೆ | 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, | 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, | 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, | 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ | 7–30 ರಿಂದ 8–00 ವರೆಗೆ |

ಆರ್ಜಿತಸೇವಾಕಾಲದಲ್ಲಿ ರೂ॥ 1–00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

ಪೇಷ್ಕಾರ್.



# ಅಕ್ಕಮಹಾದೇವಿ

ಎ. ಎಸ್. ಪಂಕಜ, ಎಂ.ಎ., ಬಿ.ಇಡಿ.

ಶಿವಶರಣೆಯರಲ್ಲೇ ಶಿರೋರತ್ನದಂತೆ ಶೋಭಿಸುವ ಮಹಾದೇವಿಯಕ್ಕನ ಭಕ್ತಿ, ತ್ಯಾಗ, ಸ್ಥೈರ್ಯ ಧೈರ್ಯಗಳು ಅದ್ಭುತವಾದವು; ಶರಣಸತಿ–ಲಿಂಗಪತಿ ಎಂಬ ಮಧುರ ಭಕ್ತಿಯನ್ನು ಸಾಧಿಸಿ ಹೆಸರಾದವಳು. ಸಾಂಪ್ರದಾಯಕ ಸಮಾಜದ ಸಂಕೋಲೆಗಳನ್ನು ಮುರಿದೊಗೆದು ಚೆನ್ನಮಲ್ಲಿಕಾರ್ಜುನನೆಂಬ ಲೋಕಪತಿಯನ್ನೇ ಪತಿಯಾಗಿ ವರಿಸಿ, ಅವಳು ಮಾಡಿದ ಉಗ್ರಸಾಧನೆ, ಪಡೆದ ಸಿದ್ಧಿ ಆಶ್ಚರ್ಯಕರವಾದವು. ಸತಿಪತಿಭಾವ ಇದಕ್ಕೆ ಸಂಬಂಧಿಸಿದ ವಚನಗಳಿಂದ ತಿಳಿಯಬಹುದು.

ಮಹಾದೇವಿಯಕ್ಕನ ವಚನಗಳಲ್ಲಿ ಕೆಲವು ತತ್ತ್ವವಚನಗಳೂ, ಶಾಸ್ತ್ರವಚನಗಳೂ, ಬೆಡಗಿನ ವಚನಗಳೂ ಇವೆ. ಆದರೂ ಬಹುಪಾಲು ವಚನಗಳು ಅನುಭಾವಿಯ ಹೃದಯಾಂತರಾಳದಿಂದ ಹೊರಸೂಸಿದ ಭಕ್ತಿವಚನಗಳು; ವಿಶ್ವಧರ್ಮದ ವಚನಗಳು. ಮಹಾದೇವಿಯಕ್ಕನ ಶಿವಭಕ್ತಿ ಜನ್ಮತಃ ಬಂದದ್ದು- ಇವಳು ತನ್ನ ಸರ್ವಕ್ರಿಯೆಗಳೂ ಚೆನ್ನಮಲ್ಲಿಕಾರ್ಜುನನಿಗಾಗಿ ಎಂದೇ ಹಾಡಿದ್ದಾಳೆ –

"ಉಡುವೆ ನಾನು ಲಿಂಗಕ್ಕೆಂದು
ತೊಡುವೆ ನಾನು ಲಿಂಗಕ್ಕೆಂದು
ಮಾಡುವೆ ನಾನು ಲಿಂಗಕ್ಕೆಂದು
ಎನ್ನಂತರಂಗ ಬಹಿರಂಗಗಳು ಲಿಂಗಕ್ಕಾಗಿ"

ಚೆನ್ನ ಮಲ್ಲಿಕಾರ್ಜುನನೇ ಮಹಾದೇವಿಯಕ್ಕನಿಗೆ ಸರ್ವಸ್ವ ಅಂತಹ ಚೆನ್ನಮಲ್ಲಿಕಾರ್ಜುನ ತನ್ನ ಬಿನ್ನಪವನ್ನು ಆಲಿಸಿ ಲಾಲಿಸಬೇಕೆಂದು ಹಂಬಲಿಸಿ ಹಾಡುತ್ತಾಳೆ. ತನಗೆ ಮತಿಗತಿ ಎಲ್ಲಾ ಅವನೇ. ಅವನು ತನ್ನ ದುಃಖದ ನೋವನ್ನು ನೋಡದಿದ್ದಲ್ಲಿ ಮತ್ತಿನ್ನಾರುಗತಿ ತನಗೆ – ಎಂದು ತನ್ನ ಅಸಹಾಯಕತೆಯನ್ನು ತೋಡಿಕೊಳುತ್ತಾಳೆ–

ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ
ಏಕೆನ್ನ ಮೊರೆಯ ಕೇಳೆಯಯ್ಯಾ ತಂದೆ ?

ಅಕ್ಕನ ಆತ್ಮಾರ್ಪಣಾಭಾವ ಎಷ್ಟು ಸ್ಪುಟವಾದದ್ದು ಎಂಬುದು –

ಆನು ನಿನಗೊಲಿದೆ, ನೀನು ಎನಗೊಲಿದೆ
ನೀನೆನ್ನನಗಲದಿಪ್ಪೆ, ನಾನಿನ್ನನಗಲದಿಪ್ಪೆ ನಯ್ಯ
ನಿನಗೆ ಎನಗೆ ಬೇರೊಂದು ಠಾವುಂಟೆ ?

ಮಹಾದೇವಿಯಲ್ಲಿ ಶಿವಭಕ್ತಿಯೊಡನೆ ವೈರಾಗ್ಯವು ಬಾಲ್ಯದಿಂದಲೇ ಬೆಳೆದು ಬಂದಿತ್ತು. ತನ್ನ ಸ್ವಭಾವಜನ್ಯವಾದ ಈ ವೈರಾಗ್ಯದಲ್ಲೂ ಭಗವಂತನ ಬಗ್ಗೆ ಪ್ರೀತಿ ಭಕ್ತಿಗಳ ಮಳೆಯನ್ನೇ ಸುರಿಸಿದ್ದಾಳೆ. ಭವಿ ಕೌಶಿಕನನ್ನು ಮದುವೆಯಾಗಿ ಸಂಸಾರ ನಡೆಸಿದಾಗ ಕೂಡ ಮಹಾದೇವಿ ವಿರಕ್ತಳೇ. ಈಕೆಯ ವೈರಾಗ್ಯ – ವಚನಗಳಲ್ಲಿ ಈ ವಿರಕ್ತಿ ಚೆನ್ನಾಗಿ ಸ್ಫುಟಗೊಂಡಿದೆ

ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದೊಡೆ ಕೆರೆ ಹಳ್ಳಬಾವಿಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು

ಎಂಬಲ್ಲಿ ಈಕೆಯದು 'ಅಭಾವ ವೈರಾಗ್ಯವಲ್ಲ ಸ್ವಭಾವ ವೈರಾಗ್ಯ'ವೆನ್ನುವುದು ನಿಚ್ಚಳವಾಗಿದೆ.

ತನ್ನ ಸರ್ವಾಂಗವೂ ಸರ್ವೇಂದ್ರಿಯಗಳೂ ಚೆನ್ನಮಲ್ಲಿಕಾರ್ಜುನನಲ್ಲೇ ಲೀನವಾಗಿರಲಿ ತನ್ನನ್ನು ನಿರ್ಲಿಪ್ತಳನ್ನಾಗಿ ಮಾಡೆಂದು ಕೇಳಿಕೊಳ್ಳುವ ಇವಳ ದೈನ್ಯತೆ ಗಮನಾರ್ಹವಾದ ಅಂಶ.

"ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ
ಬೇಡಿದೆಡೆ ಇಕ್ಕದಂತೆ ಮಾಡಯ್ಯ
ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ
ನೆಲಕ್ಕೆ ಬಿದ್ದೊಡೆ ನಾನೆತ್ತಿಕೊಂಬುದಕ್ಕೆ ಮುನ್ನವೆ
ಶುನಿ ಎತ್ತಿಕೊಂಬಂತೆ ಮಾಡಯ್ಯ ಚೆನ್ನಮಲ್ಲಿಕಾರ್ಜುನ"

ಮಹಾದೇವಿ ದೇಹದ ವ್ಯಾಮೋಹವನ್ನು ತ್ಯಜಿಸಿದ ಶಿವ ಶರಣೆ. ಇದು ಇವಳ ಒಂದು ವೈಶಿಷ್ಟವೆಂದೇ ಹೇಳಬಹುದು. "ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು? ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು?" ಎಂಬ ವಚನದಲ್ಲಿನ ಭಾವ ಅದ್ಭುತವಾಗಿದೆ,

ಭಗವದಿಚ್ಛೆಗೆ ವಿರೋಧವಾಗಿ ಮಾನವನ ಏನೂ ಮಾಡಲಾರ. ಅಲೆಗಳು ಹೋದ ದಿಕ್ಕಿಗೇ ನಾವೂ ಹೋಗಬೇಕು.

" ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಂಗಳಿಗಂಜಿದಡೆಂತಯ್ಯ ?
ಸಮುದ್ರ ತಡಿಯಲ್ಲಿ ಮನೆಯ ಮಾಡಿ ನೊರೆ ತೊರೆಗಳಿಗಂಜಿದೊಡೆಂತಯ್ಯ ?
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ ?
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ ನಿಂದೆಗಳು ಬಂದೊಡೆ ಮನದಲ್ಲಿ ಸಮಾಧಾನಿಯಾಗಿರದಿರ್ದಡೆಂತಯ್ಯ "

ಎಂದು ಸಾರ್ವತ್ರಿಕ ಸತ್ಯವನ್ನು ಹಾಡಿ ತೋರಿಸಿದ್ದಾಳೆ. ಒಂದೆಡೆ ಅವಳೇ ಹೇಳುವಂತೆ "ಮನಸಿಜನ ಬರಹವ ತೊಡೆದೆನು" ಎಂಬುದು ಅಕ್ಷರಶಃ ನಿಜ. ಮನಸಿಜನ ಆವಿರ್ಭಾವವೇ ಆಗಲಿಲ್ಲ ಇವಳಲ್ಲಿ; ಇವಳ ಹಂಬಲವೆಲ್ಲ ಪರಾತ್ಪರ ವಸ್ತು ಚೆನ್ನಮಲ್ಲಿಕಾರ್ಜುನನ ಸಂದರ್ಶನ, ಅವನೊಳಗೆ ಐಕ್ಯಳಾಗಬೇಕೆಂಬುದೇ ಹೊರತು ಸಾಮಾನ್ಯ ಕಾಮಪಿಪಾಸೆ ಇವಳ ಅಕ್ಕ ಪಕ್ಕದಲ್ಲೂ ಸುಳಿಯ

ಲಿಲ್ಲ ಮಹಾದೇವಿಗೆ ಪರಾತ್ಪರ ವಸ್ತು ಬರಿಯ ಶಿವತತ್ತ್ವ ಮಾತ್ರವಾಗಿರಲಿಲ್ಲ, ಪರವು ಸುಂದರ ಸಾಕಾರ ಮೂರ್ತಿಯೂ ಆಗಿತ್ತು. ಶಿವನಿಗಾಗಿ ಹಂಬಲಿಸಿ ಇರುಳು ನಿದ್ದೆಯಲ್ಲಿ ಅವನೊಡನೆ ಮದುವೆಯಾದಂತೆ ಕನಸು ಕಂಡು ನಲಿಯುವಳು ಮಹಾದೇವಿ.

"ಅಕ್ಕ ಕೇಳವ್ವ, ಆನೊಂದು ಕನಸಕಂಡೆ
ಚಿಕ್ಕ ಚಿಕ್ಕ ಜಡೆಗಳ
ಸುಲಿಪಲ್ಲ ಗೊರವ ಬಂದೆನ್ನ ನೆರೆದ ನೋಡಾ
ಆತನಪ್ಪಿ ತಳವೆಳಗಾದೆನೆಲೆ
ಚೆನ್ನಮಲ್ಲಿಕಾರ್ಜನನ ಕೂಡಿ ಕಣ್ದೆರೆದು ತಳ
ವೆಳಗಾದೆನೆಲೆಗೇ"

ಕನಸು ಕಂಡೆದ್ದು ತನ್ನ ಪತಿ ಶಿವನನ್ನು ಪ್ರತ್ಯಕ್ಷವಾಗಿ ನೋಡದೆ, ಆತನ ಆಲಿಂಗವನ್ನು ಪಡೆಯದೆ ಅತೀವ ಯಾತನೆಯನ್ನು ಅನುಭವಿಸಿ ತನ್ನ ವಿರಹವನ್ನು ತೋಡಿಕೊಳ್ಳುತ್ತಾಳೆ. ಅವಳಿಗೆ ಚೇತನಾಚೇತನ ವಸ್ತುಗಳಲ್ಲೂ ಅವನ ಅಸ್ತಿತ್ವವೇ ಕಂಡು ಬರುತ್ತದೆ. 'ಚಿಲಿಮಿಲಿಯೆಂದೋದುವ ಗಿಳಿಗಳಿರಾ! ನೀವು ಕಾಣಿರೇ ನೀವು ಕಾಣಿರೇ?' ಎಂದು ಗಿಳಿ, ಕೋಗಿಲೆ, ದುಂಬಿ, ಹಂಸ, ನವಿಲು ಇವೆಲ್ಲವನ್ನೂ ಅಂಗಲಾಚಿದ್ದಾಳೆ. ಇವಳು ತನ್ನಪತಿ ಚೆನ್ನಮಲ್ಲಿಕಾರ್ಜುನಗಾಗಿ ಹಂಬಲಿಸಿ ಹಂಬಲಿಸಿ ಚೇತನಾಚೇತನಾವಸ್ತುಗಳೊಂದಿಗೆ ತನ್ನ ಪ್ರಿಯನನ್ನು ತೋರಿಸುವಂತೆ ಬೇಡುತ್ತಾಳೆ–

"ಅಳಿಸಂಕುಳವೇ, ಮಾಮರವೇ, ಬೆಳದಿಂಗಳೇ
ಕೋಗಿಲೆಯೇ
ನಿಮ್ಮನೆಲ್ಲರನೂ ಒಂದು ಬೇಡುವೆನು;
ಎನ್ನೊಡೆಯ ಚೆನ್ನ ಮಲ್ಲಿಕಾರ್ಜುನ
ದೇವರ ಕಂಡರೆ ಕರೆದು ತೋರಿರೇ."

ಮಹಾದೇವಿ –' ನಿನ್ನ ಬರವೆನ್ನಸುವಿನ ಬರವು ಬಾರಯ್ಯ' ಎಂದು ಕಾತರಿಸಿದ್ದಾಳೆ. ' ಎನ್ನ – ದೇವ ಚೆನ್ನಮಲ್ಲಿಕಾರ್ಜನನಗಲಿ ಅಗಲದ ಸುಖವೆಂದಪ್ಪುದೊ ' ಎಂದು ಹಂಬಲಿಸಿ ಹಾತೊರೆದಿದ್ದಾಳೆ. "ಚೆನ್ನಮಲ್ಲಿಕಾರ್ಜುನ, ಸರ್ವಭರಿತನಾಗಿ ಎನಗೆ ಮುಖತೋರ" ಎಂದು ಅಂಗಲಾಚಿದ್ದಾಳೆ.

ಶಿವನಿಗಾಗಿ ಹಂಬಲಿಸಿ ಅವನನ್ನು ಕೂಡಿದಂತೆ ಕನಸು ಕಂಡು ಎಚ್ಚೆತ್ತು, ವಿರಹವನ್ನನುಭವಿಸಿ ಮತ್ತೆ ಹಂಬಲಿಸಿ ಪ್ರತ್ಯಕ್ಷವಾಗಿ ಮದುವೆಯಾದಂತೆ ಭಾವಿಸಿಕೊಳ್ಳುತ್ತಾಳೆ –

"ಜಲದ ಮಂಟಪದ ಮೇಲೆ ಉರಿಯ ಚಪ್ಪರ
ವನಿಕ್ಕಿ ಆಲಿಕಲ್ಲ ಹಸೆಯಹಾಸಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ
ಬಂದು ಮದುವೆಯಾದನು
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ,
ಚೆನ್ನಮಲ್ಲಿಕಾರ್ಜುನ ಗಂಡಗೆನ್ನ ಮದುವೆಯ
ಮಾಡಿದರು"

ಚಿಕ್ಕಂದಿನಿಂದಲೂ ಆತನೇ ಪತಿಯಾಗ ಬೇಕೆಂದು ಆತನಲ್ಲೇ ಮನಸಿಟ್ಟು ಅನವರತ ಹಂಬಲಿಸಿದ್ದಳು ಮಹಾದೇವಿ ಅಂತೂ ಅವನನ್ನೇ ಮನಸಾರ ಕಂಡು, ಪತಿಯಾಗಿ ಪಡೆದು ಧನ್ಯಳಾದಳು ಕನಸಿನಲ್ಲಿ 'ಹೊಳೆವ ಕಂಜೆಡೆಗಳ, ಮಣಿಮಕುಟ, ಒಪ್ಪುವ ಸುಲಿಪಲ್ಲ, ನಗೆಮೊಗದ ಕಂಗಳ ಕಾಂತಿಯ ಈರೇಳು ಭುವನಮಂ ಬೆಳಗುವ ದಿವ್ಯ ಸ್ವರೂಪಸ ಕಂಡು' ಅವಳ ಕಂಗಳ ಬರ ಹಿಂಗಿತ್ತು. "ಗಂಡ ಗಂಡರನೆಲ್ಲರ ಹೆಂಡಿರಾಗಿ ಆಳುವ ಗರುವನ ಕಂಡೆ ನಾನು, ಜಗದಾದಿ ಶಕ್ತಿಯೊಳು ಬೆರಸಿ ಮಾತನಾಡುವ ಪರಮಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡೆ." ಮಹಾದೇವಿ ಧನ್ಯಳಾದಳು

ಅನುಭಾವಿ ಮಹಾದೇವಿಯಲ್ಲಿ ಸತಿ–ಪತಿ ಭಾವ ತಾನೇ ತಾನಾಗಿ ತಾಂಡವವಾಡುತ್ತದೆ. ಇವಳು 'ನುಡಿದುದೆಲ್ಲ ಶಿವತತ್ತ್ವ, ನಡೆದುದೆಲ್ಲ ಶಿವಮಾರ್ಗ, ಬಾಲ್ಯದಿಂದಲೂ ಶಿವನೇ – ಚೆನ್ನಮಲ್ಲಿಕಾರ್ಜುನನೇ ಪತಿಯಾಗಬೇಕೆಂದು ಬಯಸಿ ಪ್ರೌಢಳಾದ ನಂತರವೂ ಅದೇ ಭಾವನೆ ಬಲಿತು ಬಂದರೂ, ಕೌಶಿಕನ ಪ್ರಸಂಗದಿಂದ ಅದು ಪ್ರಕಾಶಕ್ಕೆ ಬರಲು ಅವಕಾಶವಾಯಿತೆನ್ನಬಹುದು. 'ಸತಿಗೆ ಪತಿಯೇ ದೇವರೆಂಬ' ಹೇಳಿಕೆಯನ್ನು ವಿಶಾಲಾರ್ಥದಲ್ಲಿ ಕಂಡುಕೊಂಡು ಲೋಕಕ್ಕೆ ತಿಳಿಸಿದವಳು ಮಹಾದೇವಿ. ಲೋಕದ ಜೀವಾತ್ಮರೇ ಸತಿ. ಈ ಜೀವಾತ್ಮ ಸತಿಗಳಿಗೆ ಪರಮಾತ್ಮನೇ ಪತಿ, ಒಡೆಯ, ಯಜಮಾನ ಎಂಬುದೇ ಇವಳ ತತ್ತ್ವ. ಅದನ್ನೆ ಇವಳು ವಚನಗಳಲ್ಲಿ ಹಾಡಿದ್ದಾಳೆ –

"ಇಹ ಕ್ಕೊಬ್ಬಗಂಡನೆ ಪರಕ್ಕೊಬ್ಬಗಂಡನೇ
ಲೌಕಿಕಕ್ಕೊಬ್ಬಗಂಡನೇ ಪಾರಮಾರ್ಥ
ಕ್ಕೊಬ್ಬ ಗಂಡನೆ
ನನ್ನ ಗಂಡ ಚೆನ್ನಮಲ್ಲಿಕಾರ್ಜುನ
ದೇವನಲ್ಲದೆ
ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ
ಬಣ್ಣದ ಬೊಂಬೆಯಂತೆ"

"ಎನ್ನ ಆಕಾಯದ ಸುಖಭೋಗವ ಲಿಂಗವೇ ಭೋಗಿಸುವವನಾಗಿ 'ಶರಣಸತಿ – ಲಿಂಗಪತಿ' ಯಾದೆನು. ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು. ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದ ಅರಿಷಿಣವೆನಗೆ; ದಿಗಂಬರವೇ ದಿವ್ಯಾಂಬರ, ಶಿವಪಾದರೇಣುವೇ ಅನುಲೇಪನ, ರುದ್ರಾಕ್ಷಿಯೇ ಮೈದೊಡಿಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗ ಚೆನ್ನಮಲ್ಲಿಕಾರ್ಜುನನೇ ಗಂಡನೆನಗೆ ನನಗೆ ಬೇರೆ ಶೃಂಗಾರವೇಕೆ" ಎಂದು ಬಹು ನ್ಮಾರಸ್ಯವಾಗಿ ಹಾಡಿದ್ದಾಳೆ. 'ನಾನು ಇಂಥ ಗಂಡನನ್ನು ಪಡೆದ ಮೇಲೆ ಶೃಂಗಾರ ಅಲಂಕರಣಗಳ ಅಗತ್ಯ ನನಗೆ ಇಲ್ಲ' ಎಂಬುದು ಭಾವ. ಮನ–ಮನ ಒಂದಾದರೆ ಹೊರಗಣ ರೂಪ ಗೌಣವಾಗುವುದು ಸಹಜ ತಾನೆ! ಮೇಲಾಗಿ ಇವಳ ಪತಿ ಸಾಮಾನ್ಯನಲ್ಲ, ಗಂಡ ಗಂಡರೆಲ್ಲರ ಹೆಂಡಿರಾಗಿಸಿ ಆಳುವ ಗರುವ, ಪರಶಿವ ಚೆನ್ನಮಲ್ಲಿಕಾರ್ಜುನ ಇವನು "ಸಾವಿಲ್ಲದ ಸಹಜ, ರೂಹಿಲ್ಲದ ಚೆಲುವ, ಭವವಿಲ್ಲದ ಅಭವ, ನಿಶ್ಚಯದ ನಿಶ್ಚಲ" ಇಂಥವನಿಗೊಲಿದ ಮಹಾದೇವಿ – "ಸಾವಕೆಡುವ ಗಂಡರ ನೊಯ್ದು ಒಲೆಯೊಳಗಿಕ್ಕು" ಎಂದು ದಿಟ್ಟತನದಿಂದ ಹೇಳಿದ್ದಾಳೆ. ಅದೂ ಆ ಕಾಲದಲ್ಲಿ, ಸ್ತ್ರೀಯರಿಗೆ ಕಿಂಚಿತ್ತೂ ಸ್ವಾತಂತ್ರ್ಯವಿಲ್ಲದ ಕಾಲದಲ್ಲಿ, ಪತಿಯೇ ಪರದೈವ ವೆಂದು ತಿಳಿದ ಸತಿಯನ್ನೂ ಬಹಳ ಕೀಳಾಗಿ ನಡೆಸಿಕೊಳ್ಳುತ್ತಿದ್ದ ಕಾಲದಲ್ಲಿ; ಸ್ತ್ರೀ ಕೇವಲ ಭೋಗವಸ್ತುವಲ್ಲ; ಅವಳಿಗೂ ಆತ್ಮವಿದೆ, ತನ್ನ ಮನದಿಚ್ಛೆಯನ್ನು ಬಿಚ್ಚಿ ಹೇಳಲು ಅವಳಿಗೂ ಸ್ವಾತಂತ್ರ್ಯವಿದೆ ಎಂಬುದನ್ನು ತಿಳಿಸಿ ಕೊಟ್ಟವಳು ಮಹಾದೇವಿ! "ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವ; ಕೇಳುತ್ತ ಕೇಳುತ್ತ ಮೈಮರೆದೆರಗಿದೆ ನೋಡವ್ವ ಹಾಸಿಗೆಯ ಹಂಗಿಲ್ಲದೆ ಹೋಯಿತು ಕೇಳವ್ವ ಚೆನ್ನಮಲ್ಲಿಕಾರ್ಜುನ ದೇವರ ದೇವನು ಕೂಡುವ ಕೂಟವ ನಾನೇನೆಂದಯದೆ ಮರೆದೆ ಕಾಣವ್ವ" ಎಂದು ಹಾಡಿರುವುದರಿಂದ ಇವಳಿಗೂ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರ ಯಾವುದೋ ಒಂದು ಗಳಿಗೆಯಲ್ಲಿ ಆಗಿರಬೇಕೆಂದು ತೋರುತ್ತದೆ. ಅದಕ್ಕೆ ಮತ್ತೊಂದು ವಚನದಲ್ಲಿ ಹೀಗೆ ಹಾಡಿದ್ದಾಳೆ–

"ಲೇಸುಹಾಸು, ನೋಟವಾಭರಣ
ಆಲಿಂಗನ ವಸ್ತ್ರ ಚುಂಬನ ವಾರೋಗಣೆ
ಲಲ್ಲೆವಾತು ತಾಂಬೂಲ, ಒಲವಿಕೆಯೇ
ಅನುಲೇಪನವೆನಗೆ
ಚೆನ್ನ ಮಲ್ಲಿಕಾರ್ಜುನನ ಕೂಟ ಪರಮ
ಸುಖವವ್ವಾ"

ಹೀಗೆ ಚೆನ್ನಮಲ್ಲಿಕಾರ್ಜುನನಲ್ಲಿ ಬೆರೆತ ಮಹಾದೇವಿ, "ಭವಗೆದ್ದು ಬಂದ ಮಗಳೆಂದು ಕರುಣ

( 36ನೇ ಪುಟ ನೋಡಿ)

(8 ನೇ ಪುಟದಿಂದ)

ಹಣಕ್ಕಾಗಿ ತಾಯಿ ದುಂಧುಲಿಯನ್ನು ಹಿಂಸೆ ಮಾಡಿ, ಅವಳನ್ನು ಕೊಂದನು ಹೀಗೆ ಸ್ವೇಚ್ಛಾ ಚಾರಿಯಾಗಿ, ಚೋರವೃತ್ತಿಯಿಂದ ಹಣ ಸಂಪಾದನೆ ಮಾಡಿ, ವೇಶ್ಯೆಯರಮನೆ ಸೇರಿದನು. ಹಣದ ಆಸೆಯಿಂದ ವೇಶ್ಯೆಯರು, ದುಂಧುಕಾರಿಗೆ ಚಿತ್ರಹಿಂಸೆಕೊಟ್ಟು, ಕೈಕಾಲು ಕಟ್ಟಿ ಕೊಂದು ಬಿಟ್ಟು ಹೋಳಿದರು ದುಂಧುಕಾರಿಗೆ ಪಿಶಾಚಜನ್ಮ ಪ್ರಾಪ್ತವಾಯಿತು

ಗೋಕರ್ಣನು ತಂದೆಗೆ ವಿಧೇಯನಾಗಿ, ವೇದಾಧ್ಯಯನವಮಾಡಿ, ಶಾಸ್ತ್ರಾಭ್ಯಾಸ ಮಾಡು ತ್ತಿದ್ದಾಗ ತಂದೆ ಕಾಲವಾದುದನ್ನು ಕಂಡು ದುಃಖಿಸಿ, ಅನಂತರ ಮುಂದಿನ ವಿದ್ಯಾಭ್ಯಾಸ ಕ್ಕಾಗಿ ಕಾಶಿಗೆ ಹೋದನು. ಅಲ್ಲಿ ವ್ಯಾಸಂಗ ಮುಗಿದನಂತರ ತನ್ನ ಸ್ಥಳಕ್ಕೆ ಹಿಂತಿರುಗಿ, ತನ್ನ ಮನೆಯಲ್ಲಿಯೇ ತಂಗಿದನು. ತಂಗಿದ ರಾತ್ರಿಯೇ ದುಂಧುಕಾರಿಯ ಭೂತವು ಟಗರಿನಂತೆ, ಆನೆ ಯಂತೆ, ಎಮ್ಮೆಯಂತೆ ಕೂಗುವುದು, ದೇವತೆ ಯಂತೆ ಕಾಣಿಸಿಕೊಳ್ಳುವುದು ಹೀಗೆಲ್ಲ ಮಾಡಿ ದಾಗ, ಅದು ತನ್ನ ಸಹೋದರ ದುಂಧುಕಾರಿಯ ಪಿಶಾಚಜನ್ಮವೆಂದು ತಿಳಿಯಿತು ಶ್ರಾದ್ಧಾದಿ ಕರ್ಮಗಳನ್ನು ಗೋಕರ್ಣನು ಮಾಡಿದರೂ, ಅದರ ಪಿಶಾಚಜನ್ಮ ಹೋಗಲಿಲ್ಲ.

ಆಮೇಲೆ ಗೋಕರ್ಣನು, ಪಂಡಿತರನ್ನೂ, ಜ್ಞಾನಿಗಳನ್ನು ಕರೆಸಿ, ಪಿಶಾಚ ಜನ್ಮ ನಿವಾರಣೆಗೆ ಉಪಾಯವೇನೆಂದು ಕೇಳಿದನು. ಅವರೆಲ್ಲರೂ ಏಕಕಂಠದಿಂದ,ಭಾಗವತ ಸಪ್ತಾಹಕಥಾಶ್ರವಣವೇ ಸಾಧನವೆಂದು ನಿಶ್ಚಯಮಾಡಿ, ಗೋಕರ್ಣನಿಗೆ ತಿಳಿಸಿದರು ಕೂಡಲೇ ಗೋಕರ್ಣನು, ಭಾಗವತ ಕಥಾಸಪ್ತಾಹ ಶ್ರವಣವನ್ನು ಸಿದ್ಧತೆ ನಡೆಸಿದನು. ಕುರುಡರು, ಕುಂಟರು, ಪಾಪಿಷ್ಠರು, ಅಂಗವಿಕಲರು ಎಲ್ಲರೂ ಸಾವಿರಾರು ಸಂಖ್ಯೆಯಲ್ಲಿ ಸೇರಿದರು. ದುಂಧುಕಾರಿಯು ಪಿಶಾಚಿರೂಪದಲ್ಲಿ ಪಕ್ಕದಲ್ಲಿದ್ದ ಬಿದಿರುಮೆಳೆಯ ಪೊಟರೆಯಲ್ಲಿ ಬಂದು ಸೇರಿದನು ಭಾಗವತಕಥಾಸಪ್ತಾಹ ಪ್ರಾರಂಭವಾಯಿತು ಏಳನೆಯ ದಿವಸ ದುಂದುಕಾರಿಯ ಪಿಶಾಚಿಜನ್ಮವು ಹೋಗಿ ದಿವ್ಯರೂಪವುಂಟಾಯಿತು. ಕತ್ತಿನಲ್ಲಿ ತುಳಸೀಮಾಲೆ, ನಡುವಿನಲ್ಲಿ ಪೀತಾಂಬರ, ಶ್ಯಾಮಲ ದೇಹಕಾಂತಿ, ಕಿರೀಟಕುಂಡಲಾದಿಗ ಳಿಂದ ಅಲಂಕೃತವಾಗಿ, ಗೋಕರ್ಣ ಹತ್ತಿರ ಬಂದು ನಮಸ್ಕರಿಸಿ, 'ಮಹಾತ್ಮಾ! ನೀನ ಕೃಪೆಯಿಂದ, ಏರ್ಪಡಿಸಿದ ಭಾಗವತಕಥಾಶ್ರವಣ ದಿಂದ ನನ್ನ ಪಿಶಾಚ ಜನ್ಮಹೋಯಿತು ಈ ಕಥಾಶ್ರವಣದಿಂದ ನಾನು ಧನ್ಯನಾದೆ. ಇಗೋ ನಾನು ಹೋಗುತ್ತಿದ್ದೇನೆ' ಎಂದು ಹೇಳಿ ದುಂಧು ಕಾರಿಯು ಆಕಾಶಕ್ಕೆ ಹಾರಿದನು.

ಹಾಗೆ ಹೋಗುವಾಗ, 'ಹೇ ಗೋಕರ್ಣಾ! ಒಂದೇ ಮನಸ್ಸಿನಿಂದ ದೃಢವಾಗಿ ಮನನ ಮಾಡಿದು ದರಿಂದ, ವಿಶೇಷ ಫಲವಾದ ಮುಕ್ತಿ ನನಗೆ ದೊರೆಯಿತು ಎಚ್ಚರವಿಲ್ಲದ ವಿದ್ಯಾಭ್ಯಾಸವೂ, ನಂಬಿಕೆ ಇಲ್ಲದ ಮಂತ್ರವೂ, ಸ್ಥಿರಮನಸ್ಸಿಲ್ಲದ ಜಪವೂ, ಆಚಾರವಿಲ್ಲದ ಕುಲವೂ, ವಿಷ್ಣುಭಕ್ತರಿಲ್ಲದ ದೇಶವೂ, ಅಪಾತ್ರದಲ್ಲಿ ಮಾಡಿದ ದಾನವೂ, ಕೇವಲ ಶವಪ್ರಾಯವಲ್ಲದೆ ಬೇರೆಯಲ್ಲ ಕಥಾ ಶ್ರವಣ ಮಾಡತಕ್ಕವನಿಗೆ ಗುರುವಿನಲ್ಲಿ ವಿಶ್ವಾಸವೂ, ತನ್ನಲ್ಲಿ ಸ್ಥಿರಬುದ್ಧಿಯೂ, ಮನೋಜಯವೂ, ದೃಢ ಮನನವೂ, ಪೂರ್ಣವಾಗಿರಬೇಕು ಇವೆಲ್ಲ ಕ್ರಮವಾಗಿದ್ದ ಹೊರತು, ಪುರಾಣಶ್ರವಣಕ್ಕೆ ತಕ್ಕ ಫಲ ದೊರೆಯುವುದಿಲ್ಲ ನಿಯಮಬದ್ಧವಾಗಿ ಕೇಳಿದ ಕಥಾಶ್ರವಣದಿಂದ ಮುಕ್ತಿ ದೊರೆಯುವುದರಲ್ಲಿ ಸಂದೇಹವಿಲ್ಲ. ಹೇ! ಗೋಕರ್ಣಾ, ಮತ್ತೊಮ್ಮೆ ನೀನು ಭಾಗವತ ಸಪ್ತಾಹಕಥಾಶ್ರವಣವಮಾಡಿಸು' ಎಂದು ಹೇಳಿ ದುಂಧುಕಾರಿಯು ವಿಷ್ಣುದೂತ ರೊಡನೆ ಹೊರಟುಹೋದನು.

ಪೂರ್ವದಲ್ಲಿ ಸನಕಾದಿ ಮಹರ್ಷಿಗಳು ಭಾಗವತ ಮಹಿಮೆಯನ್ನೂ, ಸಪ್ತಾಹ ಕ್ರಮವನ್ನೂ, ಸಪ್ತಾಹಕ್ಕೆ ಬೇಕಾದ ಸಾಮಗ್ರಿಗಳನ್ನು ನಾರದರಿಗೆ ತಿಳಿಸಿದರು. ನಂತರ ನಾರದನು, ಕಥಾಶ್ರವಣ ಕಾಲದಲ್ಲಿ ಇರಬೇಕಾದ ನಿಯಮವನ್ನೂ, ಅನಂತರ ನಡೆಸಬೇಕಾದ ಶಾಂತಿ ಕ್ರಮವನ್ನೂ, ವೇದ ವ್ಯಾಸನಿಗೆ ತಿಳಿಸಿದನು. ವ್ಯಾಸಪುತ್ರನಾದ ಶುಕ ಮುನಿಯು ಭಾಗವತ ಸಪ್ತಾಹದ ಮಹಿಮೆಯನ್ನು ಪರಮಭಕ್ತಿಯಿಂದ ಸುಖಾಸೀನರಾಗಿ ಕುಳಿತಿದ್ದ ಭಕ್ತರಿಗೆ ಹೀಗೆ ಹೇಳಿದನು

'ಎಲೈ! ಧರ್ಮಜ್ಞರೆ! ರಸಜ್ಞರೇ!! ವಿಷ್ಣುಭಕ್ತರಾದ ನೀವೆಲ್ಲರೂ, ವೇದಗಳೆಂಬ ಕಲ್ಪವೃಕ್ಷಗಳಿಂದ ಗಿಳಿಯಿಂದ ಕಚ್ಚಿಬಿದ್ದ ಹಣ್ಣಿನಂತೆ ಶುಕಮುನಿಯ ಮುಖದಿಂದ ಹೊರಟು, ರಸಪೂರ್ಣವಾಗಿರುವ ಭಾರತ ಕಥೆಯನ್ನು ಅನುಸಂಧಾನ ಮಾಡುತ್ತ ಬಂದರೆ, ನಿಮ್ಮ ಹೃದಯದಲ್ಲಿ ಶ್ರೀಮನ್ನಾರಾಯಣನು ವಾಸಮಾಡುವನು. ಎಲ್ಲ ಪುರಾಣಗಳಿಗೆ ತಿಲಕಪ್ರಾಯವಾಗಿರುವ ಭಾಗವತ ಪುರಾಣವು ವಿಷ್ಣುಭಕ್ತರಿಗೆ ಧನರೂಪವಾಗಿರುವುದು. ಇದರಿಂದ ಚೇತನರಿಗೆ ಮುಕ್ತಿಯು ಕರತಲವಾಗುವುದು. ಸ್ವರ್ಗ, ಸತ್ಯ, ಕೈಲಾಸ, ವೈಕುಂಠ ಲೋಕಗಳಲ್ಲಿ ಈ ಕಥಾಶ್ರವಣ ಲಭಿಸದು. ಈ ಭೂಲೋಕದಲ್ಲಿ ಲಭಿಸುವ ಈ ಕಥಾಶ್ರವಣಾಮೃತವನ್ನು ನೀವು ಪಾನಮಾಡಿ ಕೃತಾರ್ಥರಾಗಿ' ಎಂದನು

ಭಾಗವತ ಸಪ್ತಾಹ ಕಥಾಶ್ರವಣ ಆದ ನಂತರ ಶ್ರೀಮನ್ನಾರಾಯಣನು, ಪ್ರಹ್ಲಾದ, ಬಲಿ, ಉದ್ಧವ, ಅರ್ಜುನಾದಿ ಭಕ್ತರಿಂದ ಪರಿವೃತನಾಗಿ, ಸಭಾಮಧ್ಯದಲ್ಲಿ ನಿಂತನು ಶುಕಮುನಿಯಾದಿಯಾಗಿ ಭಕ್ತರೆಲ್ಲರೂ ಪರಮಾತ್ಮನನ್ನು ಪೂಜಿಸಿ ಹರಿಕೀರ್ತನ ಮಾಡಿದರು ಪ್ರಹ್ಲಾದನು ಕೈತಾಳವನ್ನೂ, ಉದ್ಧವನು ಕಂಚಿನತಾಳವನ್ನೂ, ನಾರದನು ವೀಣೆಯನ್ನೂ, ಅರ್ಜುನನು ರಾಗಾಲಾಪವನ್ನೂ, ದೇವೇಂದ್ರನು ಮೃದಂಗ ವಾದನವನ್ನೂ, ಸನಕಾದಿಗಳು ಜಯಕಾರಶಬ್ದವನ್ನೂ ಮಾಡಿ, ಕೀರ್ತನೆ ಮಾಡಿದರು. ಪರಮಾತ್ಮನು ಪ್ರಸನ್ನ ದೃಷ್ಟಿಯಿಂದ 'ಎಲೈ, ಭಕ್ತಾಗ್ರಣಿಗಳೇ! ನಿಮ್ಮ ಕೀರ್ತನದಿಂದ ನಾನು ಪ್ರೀತನಾದೆನು ನಿಮ್ಮ ಭಕ್ತಿಯನ್ನು ಮೆಚ್ಚಿದ್ದೇನೆ. ನಿಮಗೆ ಬೇಕಾದ ವರಗಳನ್ನು ಕೇಳಿ' ಎಂದನು.

ಆಗ ಅವರೆಲ್ಲರೂ ಕೈಮುಗಿದು ನಿಂತು, 'ಹೇ ಮಹಾಪ್ರಭೋ! ಈಗ ನಾವು ನಿನ್ನಿಂದ ಅಪೇಕ್ಷಿಸತಕ್ಕ ಅನುಗ್ರಹ ಒಂದೇ. ಅದೇನೆಂದರೆ ಕಲಿಕಾಲದಲ್ಲಿ ಭಾಗವತ ಕಥಾಶ್ರವಣ ಮಾಡುವವರ ಮನಸ್ಸಿನಲ್ಲಿ, ಅವರ ಹೃದಯದಲ್ಲಿ ನಿನ್ನ


## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

### ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಚನೆಯ ಶುಲ್ಕವನ್ನು ರೂ 150-00 ಗಳಿಗೆ ನಿಗಧಿಗೊಳಿಸಲಾಗಿದೆ ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಚನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವರನ್ನು ವಿಚಾರಿಸಬಹುದು.

**ಪೇಷ್ಕಾರ್**

ಸಾನ್ನಿಧ್ಯವನ್ನು ಕರುಣಿಸು. ಅವರ ಮನೋರಥವನ್ನು ನೆರವೇರಿಸಿಕೊಡು" ಎಂದು ಪ್ರಾರ್ಥಿಸಿದರು.

ಪರಮಾತ್ಮನು 'ತಥಾಸ್ತು' ಎಂದನು.

ಶ್ರೀಮದ್ಭಾಗವತವು ಭಕ್ತಿಪ್ರಧಾನವಾದ ಶ್ರೀಕೃಷ್ಣ ಚರಿತ್ರೆ. ಇದಿರಲ್ಲಿ ಹನ್ನೆರಡು ಸ್ಕಂಧಗಳಿವೆ. ಇವೆಲ್ಲ ಶ್ರೀಕೃಷ್ಣನ ದಿವ್ಯಮಂಗಳ ವಿಗ್ರಹದ ಸಂಕೇತಗಳಾಗಿವೆ. ಮೊದಲಿನ ಎರಡು ಸ್ಕಂಧಗಳು ಶ್ರೀಕೃಷ್ಣ ಪರಮಾತ್ಮನ ಪಾದಗಳೆರಡರ ಸಂಕೇತ. ಮೂರು ನಾಲ್ಕು ಪರಮಾತ್ಮನ ತೊಡೆಗಳ ಪ್ರತೀಕ. ಐದನೆಯದು ನಾಭಿಕಮಲ, ಆರನೆಯದು, ಸ್ವಾಮಿಯ ಎದೆ, ಏಳು, ಎಂಟನೆಯ ಸ್ಕಂಧಗಳು ಅವನ ಬಾಹುಗಳ ಸಂಕೇತ. ಒಂಬತ್ತು ಹತ್ತರಲ್ಲಿ ಶ್ರೀಕೃಷ್ಣನ ಅವತಾರ, ಬಾಲಲೀಲೆ, ಸಾಹಸಕೃತ್ಯಗಳು, ದುಷ್ಟಶಿಕ್ಷಣ, ಶಿಷ್ಟರಕ್ಷಣೆ, ಅವನ ಅಮರವಾಣಿ, ದಿವ್ಯಕಂಠ – ಇತ್ಯಾದಿ. ಹನ್ನೊಂದನೆಯದು ಸ್ವಾಮಿಯ ಹಣೆಯ ಪ್ರತೀಕ. ಹನ್ನೆರಡನೆಯದು ಅವನ ದಿವ್ಯಶಿರಸ್ಸು. ಶ್ರೀಕೃಷ್ಣಾವತಾರವು ಅತ್ಯಂತ ಭವ್ಯವಾದುದು. ಪರಿಪೂರ್ಣವಾದುದು. ಮಾನವನನ್ನು ಸಂಸಾರ ಸಾಗರದಿಂದ ಮುಕ್ತನನ್ನಾಗಿ ಮಾಡುವುದಕ್ಕೆ ಬಹು ಸುಲಭ ಮಾರ್ಗವನ್ನು ಇದು ತೋರಿಸುತ್ತದೆ.

ಯಾರು ಭಾಗವತ ಕಥಾಶ್ರವಣ ಮಾಡುವರೋ, ಯಾರು ಅದನ್ನು ದೃಢ ಮನಸ್ಸಿನಿಂದ ಕೇಳುವರೋ, ಅವರಿಗೆ ಯಾವ ಮನೋರಥವೂ ದುರ್ಲಭವಲ್ಲ ಎಂದು ಸೂತಪುರಾಣಿಕರು ಶೌನಕ ಮಹರ್ಷಿಗೆ ತಿಳಿಸಿದ್ದಾರೆ.

ಕಸ್ತೂರೀ ತಿಲಕಂ ಲಲಾಟಫಲಕೇ
ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣಂ
ಕರೇಕಂಕಣಂ ।
ಸರ್ವಾಂಗೇ ಹರಿಚಂದನಂ ಸುಲಲಿತಂ
ಕಂಠೇಚ ಮುಕ್ತಾವಲೀ
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ
ಗೋಪಾಲಚೂಡಾಮಣೀ ॥

ಲಲಿತ ನವಕಿಶೋರಾ ನವಲಾವಣ್ಯಪುಂಜಾ
ಸಕಲ ರಸಿಕ ಚೂಡಾಲಂಕೃತೀ ಮುಗ್ಧಪ್ರೇಕ್ಷಾ।
ಮಧುರ ಮಧುರ ಮೂರ್ತೀ ವಿದ್ಯುದಾಭೋದ
ಕಾಂತಿ
ಸ್ಮೃರ ನಿಭೃತ ನಿಕುಂಜೇರಾಧಿಕಾಕೃಷ್ಣ
ಚಂದ್ರಾ ॥

( 6ನೇ ಪುಟದಿಂದ )

ಗಂಗಾ, ಯಮುನಾ, ಸರಸ್ವತಿ ಎಂಬ ಪುಣ್ಯ ನದಿಗಳ ತ್ರಿವೇಣೀ–ಸಂಗಮದ ಸ್ನಾನ ಬಹಳ ಪುಣ್ಯಪ್ರದವೆಂದು ನಂಬಿಕೆಯಿದೆ. ಆದರೆ ಅದಕ್ಕಿಂತಲೂ ಪಾವನಕರವಾದ ತ್ರಿವೇಣೀ ಸಂಗಮವನ್ನು ಪುಣ್ಯದ ಕಣ್ಣಿದ್ದವರಿಲ್ಲಿ ಕಾಣಬಹುದು. ಅದೇ ಭಗವನ್ನಾಮ ಗಂಗೆ, ಭಾಗವತ ಯಮುನೆ, ಸತ್ಸಂಗ ಸರಸ್ವತಿ. ಇಲ್ಲಿ ಸದಾ ಹರಿನಾಮಗಂಗೆ ಹರಿಯುತ್ತಲೇ ಇದೆ. ಪ್ರತಿದಿನ ಸಂಜೆ ಭಕ್ತಜನರು ಸೇರಿ, ಎಳೆಯ ಮಕ್ಕಳನ್ನೆಲ್ಲಾ ಒಂದುಗೂಡಿಸಿಕೊಂಡು, ನಾರಾಯಣನಾಮ ಸಂಕೀರ್ತನ ಯಜ್ಞವನ್ನು ನಡೆಸುತ್ತಾರೆ. ಇದು ಇಲ್ಲಿನ ಮುಖ್ಯ ವೈಶಿಷ್ಟ್ಯವೆನ್ನಬಹುದು. ಭಗವತ್ಕಥೆ–ಭಾಗವತ ಸಪ್ತಾಹ ಯಮುನೆಯಲ್ಲಿ ಪ್ರವಹಿಸುತ್ತಿದೆ. ಸ್ಥಳ, ಪರಿಸರ, ಹಾಗೂ ಎಷ್ಟೆಷ್ಟೋ ಜನರ ಹೃದಯಗಳನ್ನು ಪರಿಶುದ್ಧಗೊಳಿಸಿ, ಲೋಕದ ಅಜ್ಞಾನಾಂಧಕಾರವನ್ನು ಹರಿಸುವ ಬೆಳಕನ್ನು ಪಸರಿಸುವ, ಜನರಿಗೆ ಸುಖದ ಹಾದಿಯನ್ನು ತೋರಿಸುವ, ಪುಣ್ಯದ ಬೀಜವನ್ನು ಬಿತ್ತುವ, ಜೀವನಕ್ಕೆ ಬಂಡವಾಳವನ್ನು ಒದಗಿಸುವ ಕಾರ್ಯವಿಲ್ಲಿ ನಡೆಯುವುದು. ಆಗಾಗ ಭಾಗವತ ಸಪ್ತಾಹ, ಶ್ರವಣ, ಸಜ್ಜನ ಸಹವಾಸಗಳಿಗೆ ಇಲ್ಲಿ ಅವಕಾಶ ದೊರೆಯುವುದು. ಕಥಾಶ್ರವಣ, ನಾಮಸಂಕೀರ್ತನಗಳಂತೆ ಭಗವತ್‌ಪ್ರಿಯವಾದ ಕರ್ಮಗಳು ಬೇರೆಯಿಲ್ಲ.

ಆ ಭಗವತ್ಕಥಾ ಸರಸ್ಸಿನಲ್ಲಿ ಮುಳುಗಿದಾಗ ಒಮ್ಮೆ ನಮ್ಮನ್ನು ನಾವೇ ಮರೆತು, ಪರಿಶುದ್ಧ ಆನಂದಭಾವದಲ್ಲಿ ತೇಲಬಹುದು. ಜನ್ಮ ಸಾಫಲ್ಯವನ್ನು ಹೊಂದಿದ ಅನುಭವವಾಗುವುದು. ಅಲ್ಲಿ ಸೇರಿದ ಅಸಂಖ್ಯ ಜನರ, ಇಂತಹ–ಆನಂದಾನುಭೂತಿಗಳು ಸಂಕೀರ್ಣವಾದಾಗ ವಾತಾವರಣವೇ ಪರಿಶುದ್ಧಗೊಳ್ಳುವುದು. ಒಂದು ಜೀವಿ ಪರಿಪೂರ್ಣತೆಯನ್ನು ಹೊಂದುವುದಾದರೆ ಅದು ಈ ದಿವ್ಯ ಸನ್ನಿಧಾನದಲ್ಲಿ. ಆ ಪರಿಪೂರ್ಣತೆಗೆ ಒಯ್ಯುವ ಸಾಧನಗಳಾದ ಭಾಗವತ, ಭಗವನ್ನಾಮ, ಸತ್ಸಂಗ ಇಲ್ಲಿ ಅಪ್ರಯತ್ನವಾಗಿ ದೊರೆಯುತ್ತವೆ. ನಿಜವಾದ ಭಾಗವತ ತತ್ತ್ವದ ಪರಿಚಯವಾಗುವುದು ಈ ಪರಿಸರದಲ್ಲಿ! ಭಾಗವತ ತತ್ತ್ವಗಳಿಗೂ ನಮ್ಮ ನಿತ್ಯಜೀವನಕ್ಕೂ ಇರುವ ಸಾಮ್ಯ ಇಲ್ಲಿ ಪ್ರತ್ಯಕ್ಷ ಕಂಡುಬರುವುದು

---

(34 ನೇ ಪುಟದಿಂದ )

ವಿಂತೆಗೆದು ಬಿಗಿಯಪ್ಪಿದರೆ ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು" ಎಂದು ವಚನದಲ್ಲಿ ಹಾಡಿದ್ದಾಳೆ. ಲಿಂಗ ಬೇರೆ ತಾನು ಬೇರೆ ಎಂಬ ದ್ವೈತಭಾವ ಆಗ ಅಳಿದು, ಲಿಂಗವೇ ತಾನು, ತಾನೆ ಲಿಂಗ ಎಂಬ ಐಕ್ಯಸ್ಥಲದ ಭಾವ ನೆಲಸುತ್ತದೆ. ಆರಾಧನೆಯಲ್ಲಿ "ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ, ನಿಸ್ಸಂಗವೆನ್ನೆ, ಆಯಿತೆನ್ನೆ ಆಗದೆನ್ನೆ, ನೀನೆನ್ನೆ ನಾನೆನ್ನೆ; ಚೆನ್ನಮಲ್ಲಿಕಾರ್ಜುನನಲಿಂಗದಲ್ಲಿ ಘನ ಲಿಂಗೈಕ್ಯವಾದ ಬಳಿಕ, ಮತ್ತೇನೂ ಎನಲೊಲ್ಲದೆ ಇದ್ದೆನು. ಹೀಗೆ ಒಂದು ಜೀವಾತ್ಮ, ಒಂದು ಬಿಂದು, ಪೃಥ್ವಿಯಲ್ಲಿ ಅವತರಿಸಿ, ತನಗೆ ವಿಧಿಸಿದ ಕಾರ್ಯ ನಿರ್ವಹಿಸಿ, ಮತ್ತೆ ಪರಮಾತ್ಮನಲ್ಲಿ ಅಂದರೆ ಕರುಣಾಸಿಂಧುವಿನಲ್ಲಿ ಐಕ್ಯವಾಯಿತು.

ಅನುಭಾವಿ ಮಹಾದೇವಿಯಕ್ಕ ಭಗವದ್ ಭಕ್ತಿ ಅಚಲ ನಿಷ್ಠೆ, ಗುರುವಿನಲ್ಲಿ ಗೌರವ, ಪರಮಾತ್ಮ–ಪಾತಿವ್ರತ್ಯ ಈ ಎಲ್ಲಾ ದೃಷ್ಟಿಯಲ್ಲೂ ಭಾರತ ಧರ್ಮದ ಸಂಸ್ಕೃತಿಯ ಪ್ರತೀಕವಾಗಿದ್ದಾಳೆ. ಇವಳ ಜೀವನ, ಭಕ್ತಿಸಾಧನೆ, ದಿವ್ಯ ದಾಂಪತ್ಯ ಸಿದ್ಧಿ, ಈಶ್ವರ ಸಾಕ್ಷಾತ್ಕಾರ ಅನೋಘವಾದುದು. ಇವಳ ಪರಿಶುದ್ಧ ದಿವ್ಯಜೀವನದಂತೆ ಇವಳ ಸ್ವಾನುಭವಾತ್ಮಕ ಸಾಹಿತ್ಯವೂ ರಸಾತ್ಮಕವಾಗಿ ಜೀವಕಳೆಯಿಂದ ಇಂದಿಗೂ ವರ್ಚಸ್ವಿಯಾಗಿದೆ. ಸದಾಚಾರ, ದೃಢನಿಷ್ಠೆ, ಮಧುರ ಭಕ್ತಿಗಳ ಸಾಕಾರ ಮೂರ್ತಿ, ತ್ಯಾಗಮಯಿ ಮಹಾದೇವಿ ಇಂದಿಗೂ ಅಮರಳಾಗಿದ್ದಾಳೆ ತನ್ನ ವಚನಗಳ ಮೂಲಕ ಅವಳ. ಭಕ್ತಿ ಎಷ್ಟು ಪವಿತ್ರವೋ ಎಷ್ಟು ಶುದ್ಧವೋ, ಅವಳ ಆಚರಣೆ ಚರಿತ್ರೆಗಳೂ ಅಷ್ಟೇ ಪವಿತ್ರ, ಅಷ್ಟೇ ಶುದ್ಧ. ತನ್ನ ಸ್ಫುರದ್ರೂಪಕ್ಕಿಂತ ಹೆಚ್ಚಾಗಿ ಭಕ್ತಿಯಿಂದ, ಶುದ್ಧ ಸರಳ ಪವಿತ್ರ ಅಂತಃಕರಣ ದಿಂದ ಎಲ್ಲರ ಮನಸ್ಸನ್ನು ಸೂರೆಗೊಂಡಿದ್ದಾಳೆ ಅಕ್ಕಮಹಾದೇವಿ.

ಮಹಾಜ್ಞಾನಿ ಅಲ್ಲಮಪ್ರಭು ತನ್ನ ಒಂದು ವಚನದಲ್ಲಿ ಮಹಾದೇವಿಯಕ್ಕನ ಭಕ್ತಿಸಾಧನೆ ಸಾಧನೆ ಹಾಗೂ ವ್ಯಕ್ತಿತ್ವದ ಬಗ್ಗೆ ಹೇಳಿದಂತೆ–

"ಅಂತರಂಗದ ಪ್ರಭೆ ಬಹಿರಂಗವೆಲ್ಲ
ತಾನೆಯಾಗಿ
ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ
ಮಹಾದೇವಿಯಕ್ಕನ
ಶ್ರೀಪಾದಕ್ಕೆ ನಮೋ ಎಂಬೆನು ಕಾಣಾ
ಚೆನ್ನ ಬಸವಣ್ಣ"

★

# ಬೀಳ್ಕೊಡುಗೆ ಸಮಾರಂಭ

"ಇಷ್ಟು ಘನವಾದ ಉದ್ಯೋಗ ಇನ್ನು ಮುಂದೆ ನನಗೆ ದೊರಿಯದು! ಇದು ಯಾವ ಕಾಲದ ಭಾಗ್ಯವೋ! ಈ ಘನ ಸತ್ಕಾರವನ್ನೂ ಈ ಜನ್ಮ ದಲ್ಲಿ ಮರೆಯಲಾರೆ! ನಾನು ನಿಜವಾಗಿ ಧನ್ಯ!!"

ಮೂರು ವರ್ಷ ಏಳು ತಿಂಗಳ ಕಾಲ ತಿರುಮಲೆ-ತಿರುಪತಿ ದೇವಸ್ಥಾನಗಳಲ್ಲಿ ಎಲ್ಲವೂ ತಾನೇ ಆಗಿ ಮುಗ್ಧ ಭಕ್ತಿಯಿಂದಲೂ, ಸಕಲ ಭಕ್ತಜನಕ್ಕೆ ಆನಂದ ವುಂಟಾಗುವಂತೆಯೂ, ಹಿಂದೂ ಧರ್ಮ ಸಂರಕ್ಷಣೆಯ ಕಂಕಣಧಾರಿಯಾಗಿಯೂ, ಕವಿ ಪಂಡಿತ ಪ್ರಿಯರಾಗಿಯೂ, ಆಡಳಿತ ನಿರ್ವಾಹಕ ರಾಗಿ ಕೆಲಸ ಮಾಡಿದ ಶ್ರೀ ಪಿ. ವಿ. ಆರ್ ಕೆ ಪ್ರಸಾದ್ ಅವರು ತಿ. ತಿ. ದೇವಸ್ಥಾನಗಳ ಉದ್ಯೋಗಿಗಳು ತಮಗೆ ನೀಡಿದ ಬೀಳ್ಕೊಡುಗೆ ಸಮಾರಂಭದಲ್ಲಿ ಆಡಿದ ಮಾತುಗಳಿವು

ಜುಲೈ 9ನೇ ತಾರೀಖು ರಾತ್ರಿ ತಿರುಪತಿಯ ತಿ ತಿ. ದೇ. ಉದ್ಯೋಗಿಗಳು ನೀಡಿದ ಬೀಳ್ಕೊಡುಗೆ ಯಲ್ಲಿ ಅಂದೇ ಹೊಸದಾಗಿ ಆಡಳಿತ ಸೂತ್ರಗಳನ್ನು ಅಂಗೀಕರಿಸಿದ ನೂತನ ಕಾರ್ಯನಿರ್ವಹ ಣಾಧಿಕಾರಿ ಶ್ರೀ ಜಿ ಕುಮಾರಸ್ವಾಮಿ ರೆಡ್ಡಿ ಅವರೂ ಭಾಗವಹಿಸಿದ್ದರು. ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಪಿ. ಎಸ್. ರಾಜಗೋಪಾಲರಾಜು ಅವರ ಅಧ್ಯಕ್ಷತೆ ಯಲ್ಲಿ ನಡೆದ ಸಭೆಯಲ್ಲಿ ತಿ. ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ ಸುಬ್ಬರಾಯುಲು, ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ಟಿ ಎಸ್ ಎಸ್. ಎನ್. ರಾಜು ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯ ಶ್ರೀ ಕೆ ವೀರಾರೆಡ್ಡಿ, ಹೈದರಾಬಾದಿನ ವೇದಾಂತ ವರ್ಧಿನೀ ಕಾಲೇಜಿನ ಪ್ರಾಂಶುಪಾಲ ಶ್ರೀ ಜಿ ರಾಮಮೂರ್ತಿ, ಮತ್ತಿತರರು ಶ್ರೀ ಪಿ ವಿ ಆರ್. ಕೆ. ಪ್ರಸಾದರ ಕಾರ್ಯಕೌಶಲವನ್ನೂ, ವ್ಯಕ್ತಿತ್ವವನ್ನೂ ವಿವರಿಸಿ ಹೊಸ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರಿಗೆ ಸ್ವಾಗತವನ್ನು ಬಯಸಿದರು ಕಮೀಷನರ್ ಶ್ರೀ ರಾಜಗೋಪಾಲ ರಾಜು ಅವರು ಮಾತನಾಡುತ್ತ ಶ್ರೀ ಪ್ರಸಾದರು 'ಹಿರಿಯರಲ್ಲಿಯೂ ಹಿರಿಯರೆಂದು' ಹೇಳುತ್ತ ತಮ್ಮ ಪೂರ್ವ ಕಾರ್ಯನಿರ್ವಹಣಾಧಿಕಾರಿಗಳ ಕಾರ್ಯವನ್ನು ಮುಂದುವರಿಸಿ ಶೋಭಾಯಮಾನ ವಾಗುವಂತೆ ಪೂರ್ಣಗೊಳಿಸಿದ ಕೀರ್ತಿ ಅವರದು ಎಂದರು. ಇತರರ ಅನುಕೂಲಗಳನ್ನು ಹೇಗೆ ಸಾಧಿಸುವುದು ಎಂಬುದೇ ಶ್ರೀ ಪ್ರಸಾದರ ನಿರಂತರ ಚಿಂತೆಯೆಂದೂ ಆ ದೃಷ್ಟಿಯಿಂದಲೇ ಅನೇಕ ಯೋಜನೆಗಳನ್ನು ಆರಂಭಿಸಿದರೆಂದೂ ಶ್ರೀ ಡಿ. ಸುಬ್ಬರಾಯುಲು ಅವರೆಂದರು



ಮೇಲಿನಿಂದ: ಚಿತ್ರ 1 ಶ್ರೀ ರಾಜಗೋಪಾಲರಾಜು ಅವರ ಕೈಕುಲುಕುತ್ತಿರುವ ಶ್ರೀ ಜಿ ಕುಮಾರಸ್ವಾಮಿ ರೆಡ್ಡಿ

ಚಿತ್ರ 2 ಮಾತನಾಡುತ್ತ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ

ಚಿತ್ರ 3. ಗೀತೋಪದೇಶದ ಪ್ರತಿಮೆಯನ್ನು ಪಡೆಯುತ್ತಿರುವ ಶ್ರೀ ಪಿ ವಿ. ಆರ್. ಕೆ. ಪ್ರಸಾದ್.

'ತಮ್ಮ ಅಧಿಕಾರಾವಧಿಯಲ್ಲೇ ಅನೇಕಬಾರಿ ಕಾಲುನಡಿಗೆಯಲ್ಲಿ ಬೆಟ್ಟವನ್ನು ಹತ್ತಿದವರು ಶ್ರೀ ಪ್ರಸಾದರು ಎಂದೂ, ಎಲ್ಲ ಉತ್ಸವಗಳಲ್ಲೂ ತಾವು ಪಾಲುಗೊಂಡು ಇತರ ಅಧಿಕಾರಿಗಳನ್ನೂ ಪಾಲು ಗೊಳ್ಳುವಂತೆ ಮಾಡಿದರೆಂದೂ ಶ್ರೀ ಟಿ ಎಸ್. ಎಸ್ ಎನ್. ರಾಜು ಅವರು ತಿಳಿಸಿದರು.

ತಿ. ತಿ ದೇವಸ್ಥಾನಗಳ ಉದ್ಯೋಗಿಗಳ ಪರವಾಗಿ ಶ್ರೀ ಚೆಂಗಾರೆಡ್ಡಿ, ಶ್ರೀ ಟಿ. ಆನಂದ್, ಶ್ರೀ ಚಂದ್ರ ಮೌಳಿ ಮತ್ತಿತರರು ಮಾತನಾಡಿದರು ತಿ. ತಿ. ದೇ. ಉದ್ಯೋಗಿಗಳ ಸಂಕ್ಷೇಮಕ್ಕಾಗಿ ಶ್ರೀ ಪ್ರಸಾದರು ಕೈಹಿಡಿದ ಉದ್ಯೋಗಿ ಸಂಕ್ಷೇಮ ನಿಧಿ, ಸ್ವಂತ ಮನೆಯೋಜನೆ ಮತ್ತಿತರ ಕಾರ್ಯ ಕ್ರಮ ಗಳನ್ನು ವಿವರಿಸಿ ಅಭಿನಂದನೆಗಳನ್ನು ತಿಳಿಸಿದರು ಉದ್ಯೋಗಿಗಳ ಸಂಘದ ವ ತಿ ಯಿ ಂ ದ ಬೀಳ್ಕೊಡುಗೆಯ 'ಗೀತೋಪದೇಶ'ದ ಸಂಸ್ಮರಣಿ ಯನ್ನು ಶ್ರೀ ಚೆಂಗಾರೆಡ್ಡಿ ಅವರು ನೀಡಿದರು. ತಿ. ತಿ. ದೇ. ಪೈಂಟಿಂಗ್ ಸೆಲ್‌ನ ಅಧಿಕಾರಿ ಶ್ರೀ ಹೆಸ್ರಿ ಕೆ ಎಂ ಡಿ. ಅವರು ಬೀಳ್ಕೊಡುಗೆಯ ಕವನ ಸುಮಮಾಲೆಯನ್ನು ಅರ್ಪಿಸಿದರು.

( 40 ನೇ ಪುಟ ನೋಡಿ )

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಪ್ರಕಟನ ವಿಭಾಗ ಹಾಗೂ ಧಾರ್ಮಿಕ ಗ್ರಂಥ ಪ್ರಕಾಶನ ಸಹಾಯಧನ ಯೋಜನೆಯ ಅನುಷ್ಠಾನಕ್ಕಾಗಿ ಹೊಸ ತಜ್ಞ ಸಮಿತಿಯನ್ನು ಕೆಳಕಂಡ ಸದಸ್ಯರೊಂದಿಗೆ ಹೊಸದಾಗಿ ಸಂಯೋಜಿಸಲಾಯಿತು

ಡಾ॥ ವಿದ್ವಾನ್ ವಿಶ್ವಂ (ಪ್ರಧಾನ ಸಂಪಾದಕರು, ತಿ ತಿ ದೇ)

ಡಾ॥ ಎನ್. ವಿ ರಾಮಕೃಷ್ಣಮಾಚಾರ್ಯ (ಸಂಪಾದಕರು, ತಿ ತಿ ದೇ ಪ್ರಕಟನೆಗಳು)

ಡಾ॥ ಪಿ. ರಾಧಾಕೃಷ್ಣಶರ್ಮ (ನಿರ್ದೇಶಕರು, ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ)

ಡಾ॥ ಎಸ್. ಬಿ ರಘುನಾಥಾಚಾರ್ಯ (ಕೋ-ಆರ್ಡಿನೇಟರ್, ತಿ ತಿ. ದೇ. ಪ್ರಕಟನೆಗಳು)

ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ (ಪ್ರಿನ್ಸಿಪಾಲ್, ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ)

ಡಾ॥ ಇ. ಶ್ರೀಕೃಷ್ಣಶರ್ಮ (ನಿವೃತ್ತ ಸಂಸ್ಕೃತ ಪ್ರಾಚಾರ್ಯರು, ತಿರುಪತಿ)

ಡಾ॥ ಜಿ ಎಸ್ ರೆಡ್ಡಿ (ತೆಲುಗು ಪ್ರಾಚಾರ್ಯರು ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯ)

ಡಾ॥ ದಿವಾಕರ್ಲ ವೆಂಕಟಾವಧಾನಿ (ನಿವೃತ್ತ ತೆಲುಗು ಪ್ರಾಚಾರ್ಯರು, ಉಸ್ಮಾನಿಯಾ ವಿ ವಿ)

ಡಾ॥ ಬಿ. ರಾಮರಾಜು (ತೆಲುಗು ವಿಭಾಗಾಧ್ಯಕ್ಷರು, ಉಸ್ಮಾನಿಯಾ ವಿ ವಿ)

ಡಾ॥ ಎಕ್ಕಿರಾಲ ಕೃಷ್ಣಮಾಚಾರ್ಯ (ವರ್ಲ್ಡ್ ಟೀಚರ್ಸ್ ಟ್ರಸ್ಟ್, ವಿಶಾಖಪಟ್ಟಣ)

ಶ್ರೀ ಎಂ ರಾಮಕೃಷ್ಣಶಾಸ್ತ್ರಿ (ಪರ್ಯವೇಕ್ಷಕರು ತಿ ತಿ. ದೇ. ಪ್ರಕಟನಶಾಖೆ)

ಶ್ರೀ ಕಾಟ್ರಪಾಟಿ ಸುಬ್ಬರಾವ್ (ಸಂಪಾದಕರು, ಸಪ್ತಗಿರಿ)

ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ (ಪೌರಸಂಬಂಧಾಧಿಕಾರಿ, ತಿ. ತಿ. ದೇ)

ಶ್ರೀ ವೈ ವಿ. ರಾಮಿರೆಡ್ಡಿ (ಸದಸ್ಯರು ತಿ ತಿ. ದೇ ಆಡಳಿತ ನಿರ್ವಾಹಕ ಮಂಡಳಿ)

*

ಗುಂಟೂರಿನ ಶಾರದಾ ನಿಕೇತನ ಪ್ರಾಚ್ಯ ಕಲಾಶಾಲೆ ಹಾಗೂ ಪಾಠಶಾಲೆಗೆ ರೂ 15000 ವನ್ನೂ ಪಿ ರಾವುಲದ ಸಂಸ್ಕೃತ ಪಾಠಶಾಲೆಗೆ ರೂ 12300 ಅನ್ನೂ, 1982-83 ಕ್ಕೆ ಮಂಜೂರು ಮಾಡಲಾಯಿತು ಜಿಲ್ಲೆಲ್ಲಮೂಡಿ ಮಾತೃಶ್ರೀ ವಿದ್ಯಾಸಂಸ್ಥೆಗೆ 1982-83 ಕ್ಕಾಗಿ 25000 ರೂ ಗಳನ್ನು ಮಂಜೂರು ಮಾಡಲಾಯಿತು

* * * *

ಶ್ರೀ ವೆಂಕಟೇಶ್ವರ ಪ್ರಾಚ್ಯಕಲಾಶಾಲೆ, ತಿರುಪತಿಯಲ್ಲಿ ಪ್ರಾಚ್ಯವಿಜ್ಞಾನದಲ್ಲಿ ಮೂರು ವರ್ಷದ ಬಿ ಎ ಸ್ನಾತಕ ಪದವಿ ತರಗತಿಯನ್ನು ಆರಂಭಿಸಲು ಅನುಮತಿ ನೀಡುತ್ತ, ಒಬ್ಬ ಚರಿತ್ರೆಯ ಅಧ್ಯಾಪಕರ ಸ್ಥಾನವನ್ನು ಮಂಜೂರು ಮಾಡಲಾಯಿತು

* * * *

ವೇದ ಪಾರಾಯಣ ಪ್ರಣಾಳಿಯ ಪರ್ಯವೇಕ್ಷಕರಿಗೆ ನೀಡುವ ಮಾಹೆಯಾನ ಸಂಭಾವನೆಯನ್ನು ಸರ್ವರಿಗೂ ಸಮಾನವಾಗಿಸಿ ರೂ. 850/ ಮಾಹೆಯಾನ ಮಾಡಲಾಯಿತು. ಹೆಚ್ಚು ಮಂದಿ ಪರ್ಯವೇಕ್ಷಕರನ್ನು ನಿಯಮಿಸುವುದರ ಮೂಲಕ ಅವರುಗಳ ಅಧಿಕಾರ ಕ್ಷೇತ್ರವನ್ನು ತಗ್ಗಿಸಲು ತೀರ್ಮಾನಿಸಲಾಯಿತು ಒಂದು ಜಿಲ್ಲೆಗೆ ಒಬ್ಬ ಪರ್ಯವೇಕ್ಷಕರಿರಬೇಕೆಂದು ತೀರ್ಮಾನಿಸಲಾಯಿತು

* * * *

ನಾರಾಯಣವನದ ಕಲ್ಯಾಣ ವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿನಂತೆಯೇ ನಾಗಲಾಪುರದ ಶ್ರೀ ವೇದನಾರಾಯಣಸ್ವಾಮಿ ಆಲಯದಲ್ಲೂ ರೂ-150=00 ಶುಲ್ಕದಿಂದ ಆರ್ಜಿತ ಕಲ್ಯಾಣೋತ್ಸವವನ್ನು ನಡೆಸಬೇಕೆಂದು ತೀರ್ಮಾನಿಸಲಾಯಿತು

* * * *

ತಿರುಮಲೆಯಲ್ಲಿನ ನಾರಾಯಣಗಿರಿಯ ರಿಂಗ್ ರೋಡ್ ಬಳಿ ನಿರ್ಮಿಸಲಾಗುವ ತಿ. ತಿ. ದೇ. ಅತಿಥಿಗೃಹಕ್ಕಾಗಿ ರೂ 22 ಲಕ್ಷವನ್ನು ಮಂಜೂರುಮಾಡಲಾಯಿತು

* * * *

ತಿರುಮಲೆ-ತಿರುಪತಿ ದೇವಸ್ಥಾನಗಳು ನಿರ್ಮಾಣ ಮಾಡಿ ವಿತರಣೆ ಮಾಡಿದ 'ತಿರುಪತಿ ತೀರ್ಥಯಾತ್ರೆ' 'ಮಾನವಸೇವೆಯೇ ಮಾಧವ ಸೇವೆ' ಎನ್ನುವ ಎರಡೂ ಸಾಕ್ಷ್ಯಚಿತ್ರಗಳನ್ನು ಹಿಂದಿ, ಆಂಗ್ಲ ಭಾಷೆಗಳಲ್ಲಿ ಡಬ್ ಮಾಡಲು ಖ್ಯಾತ ನಿರ್ದೇಶಕ ಶ್ರೀ ಎಂ. ಎ. ಕೃಷ್ಣಸ್ವಾಮಿ ಅವರಿಗೆ ಟೆಂಡರಿಲ್ಲದೆ ರೂ. 80 ಸಾವಿರ ವೆಚ್ಚದಲ್ಲಿ ನೀಡಲು ಅನುಮತಿಸಲಾಯಿತು. ಶ್ರೀ ತಾಳ್ಳಪಾಕ ಅನ್ನಮಾಚಾರ್ಯರ ಬಗ್ಗೆ ಚಲನಚಿತ್ರ

( 39ನೇ ಪುಟ ನೋಡಿ )



ಮೇಲಿನಿಂದ: ತಿ ತಿ. ದೇ. ಕಾರ್ಯನಿರ್ವಹಣಾಧಿಕಾರಿದ ಹಸ್ತಾಂತರದಲ್ಲಿ ಎಡದಿಂದ ಬಲಕ್ಕೆ ಶ್ರೀ ಪಿ. ಎಸ್ ರಾಜಗೋಪಾಲರಾಜು, ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ, ಶ್ರೀ ಪಿ ವಿ. ಆರ್ ಕೆ. ಪ್ರಸಾದ್. ಶ್ರೀ ವೆಂಕಟೇಶ್ವರಸ್ವಾಮಿ ಪ್ರಸಾದವನ್ನು ಸ್ವೀಕರಿಸುತ್ತಿರುವ ಶ್ರೀ ಜಿ ವೆಂಕಟೇಶ್ವರುಲು, ಶ್ರೀ ವೀರಾರೆಡ್ಡಿ (ಆ. ನಿ ಮಂ. ಸದಸ್ಯರು). ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ, ಶ್ರೀ ಪಿ ವಿ. ಆರ್ ಕೆ. ಪ್ರಸಾದ್, ಶ್ರೀ ಪಿ. ಎಸ್ ರಾಜಗೋಪಾಲರಾಜು ಅವರುಗಳು.

## ಕರ್ನಾಟಕದಲ್ಲಿ ಸಂಸ್ಕೃತ, ವೇದ ವಿದ್ವಾಂಸ ಪ್ರಶಸ್ತಿ

ಕರ್ನಾಟಕ ಸರ್ಕಾರ ಎಂದಿನಂತೆ ಈ ಬಾರಿಯೂ ಹತ್ತು ಮಂದಿ ಸಂಸ್ಕೃತ, ಹಾಗೂ ಐವರು ವೇದ ಪಂಡಿತರಿಗೆ ಪ್ರಶಸ್ತಿ ನೀಡಿದೆ ಆಯ್ಕೆಯಾದ ಸಂಸ್ಕೃತ ಹಾಗೂ ವೇದ ವಿದ್ವಾಂಸರ ಪಟ್ಟಿ ಕೆಳಕಂಡಂತಿದೆ.

ಸಂಸ್ಕೃತ ಪಂಡಿತರು: ಸರ್ವಶ್ರೀ ಗಣಪತಿ ಶಾಸ್ತ್ರಿ ಗಣಿ, ಆರ್ ರಾಮಶಾಸ್ತ್ರಿ, ಎಚ್ ಪಿ. ನಾರಾಯಣಶಾಸ್ತ್ರಿ, ಶಿವಕುಮಾರಶಾಸ್ತ್ರಿ. ಮಾರ್ತಾಂಡ ಚಿದಂಬರ ದೀಕ್ಷಿತ್, ಎಸ್ ಎಸ್ ಕೃಷ್ಣ ಜೋಯಿಸ್, ಜಗ್ಗು ಸುದರ್ಶನಾಚಾರ್ಯ. ಕೆ ಟಿ ಪಾಂಡುರಂಗಿ, ಪ್ರಭಾನಂದ ಶಾಸ್ತ್ರಿ, ಹಾಗೂ ಶಾಂತವೀರ ಮಹಾಸ್ವಾಮಿಗಳು.

ವೇದ ವಿದ್ವಾಂಸರು ಎಂ. ಪುಟ್ಟ ನರಸಿಂಹ ಶಾಸ್ತ್ರಿ, ಎಂ. ಎಸ್. ತಿರುಮಲಶಾಸ್ತ್ರಿ, ಶಂಕರ ಶಾಸ್ತ್ರಿ ಸೂರಿ, ಎಸ್ ಕೆ. ಸುಬ್ರಹ್ಮಣ್ಯಗಣಪತಿ, ಹಾಗೂ ತಮ್ಮಣ್ಣ ಶಾಸ್ತ್ರಿ;



ಯೋಗಶಿಬಿರದ ಉದ್ಘಾಟನೆಯಲ್ಲಿ ದೀಪ ಬೆಳಗುತ್ತ ಶ್ರೀಮತಿ ವಂದನಾಶ್ರೀವಾಸ್ತವ, ಪಕ್ಕದಲ್ಲಿ ಬಳಗದ ಅಧ್ಯಕ್ಷೆ ಶ್ರೀಮತಿ ಗಂಗಮ್ಮ ಬಸವರಾಜ್, ಚಿತ್ರ 2. ಶಿಬಿರದ ಉಪಯುಕ್ತತೆಯ ಬಗ್ಗೆ ಮಾತನಾಡುತ್ತ ನಿರ್ದೇಶಕಿ ಕುಮಾರಿ ಗಾಯತ್ರಿ




ಈ ಪ್ರಶಸ್ತಿಯೋಜನೆಯಂತೆ ವಿಜೇತರಿಗೆ ತಲಾ ಒಂದು ಸಾವಿರ ರೂಪಾಯಿ ಹಾಗೂ ಪ್ರಶಸ್ತಿ ಪತ್ರವನ್ನು ನೀಡಲಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದಿನಾಂಕ 25–6–82 ರಂದು ಸಂಜೆ ನಡೆದ ಸಭೆಯಲ್ಲಿ ಈ ಪ್ರಶಸ್ತಿ ಪತ್ರಗಳನ್ನೂ ಪಾರಿತೋಷಿಕವನ್ನೂ ವಿತರಣೆ ಮಾಡಲಾಯಿತು

( 38ನೇ ಪುಟದಿಂದ )

ಮಾಡುವ ನಿರ್ಮಾಪಕರಿಗೆ ಆರ್ಥಿಕ ನಿಬದ್ಧತೆ ಯಿಲ್ಲದಂತೆ, ದೇವಸ್ಥಾನಗಳ ವತಿಯಿಂದ ತಕ್ಕ ನೆರವನ್ನು ನೀಡಲು ತೀರ್ಮಾನಿಸಲಾಯಿತು.

* * * *

ತಿರುಮಲೆ ದೇವಾಲಯದಲ್ಲಿ ನಡೆಯುವ ವಿವಿಧ ಉತ್ಸವಗಳು ಆಗಮಯಜ್ಞಗಳು ಮತ್ತಿತರ ಕಾರ್ಯಕ್ರಮಗಳನ್ನು ಪ್ರೀ ರೆಕಾರ್ಡೆಡ್ ವೀಡಿಯೋ ಕ್ಯಾಸೆಟ್‌ಗಳನ್ನಾಗಿ ತಯಾರಿಸಲು, ಯಾವುದೇ ಆರ್ಥಿಕ ನಿಬದ್ಧತೆಯಿಲ್ಲದಂತೆ ಗೀತಾ ಎಲೆಕ್ಟ್ರಾನಿಕ್ಸ್ ಹೈದರಾಬಾದ್ ಅವರಿಗೆ ಒಪ್ಪಿಸಲು ತೀರ್ಮಾನಿಸಲಾಯಿತು

### ಯೋಗಾಭ್ಯಾಸ ಶಿಬಿರ

ಕೋಲಾರದ ನಿವೇದಿತಾ ಯೋಗ ಬಳಗದ ಆಶ್ರಯದಲ್ಲಿ ಸಂಸ್ಥೆಯ ನಾಲ್ಕನೆಯ ಯೋಗಾಭ್ಯಾಸ ಶಿಬಿರವು ಕಳೆದ ಜೂನ್ 25 ರಂದು ಆರಂಭವಾಯಿತು

ಹಿಂದೂ ಸೇವಾ ಪ್ರತಿಷ್ಠಾನದ ಸೇವಾವ್ರತಿ ಕುಮಾರಿ ಗಾಯತ್ರಿ ಅವರ ನಿರ್ದೇಶನದಲ್ಲಿ ಹದಿನೈದು ದಿನ ನಡೆದ ಈ ಯೋಗ ಶಿಬಿರದಲ್ಲಿ ಮಹಿಳೆಯರಿಗೆಂದೇ ಸಂಯೋಜಿಸಲಾದ ಹಲವಾರು ಯೋಗಾಸನಗಳ ರೀತಿನೀತಿಗಳನ್ನೂ ಪ್ರಯೋಜನ ಪರಿಕರಗಳನ್ನೂ, ಪ್ರಯೋಗ ವಿಧಾನಗಳನ್ನೂ ಪರಿಚಯಿಸಿಕೊಡಲಾಯಿತು. ಅಲ್ಲದೆ, ಮಹಿಳೆಯರಿಗಾಗಿ, ಯೋಗದ ಬಗ್ಗೆ ವಿಶೇಷ ಪಾಠ ಪ್ರವಚನ, ಉಪನ್ಯಾಸಗಳನ್ನೂ ಏರ್ಪಡಿಸಲಾಗಿದ್ದಿತು. ನಿತ್ಯ ಬೆಳಗ್ಗೆ ಹಾಗೂ ಸಂಜೆ ಎರಡು ತಂಡಗಳಲ್ಲಿ ಈ ಕಾರ್ಯಕ್ರಮ ನಡೆಯಿತು.

ಆರಂಭದಲ್ಲಿ ಶಿಬಿರವನ್ನು ಶ್ರೀಮತಿ ಉಷಾ ವಿಶ್ವನಾಥನ್ ಅವರ ಅಧ್ಯಕ್ಷತೆಯಲ್ಲಿ ಶ್ರೀಮತಿ ವಂದನಾ ಶ್ರೀ ವಾಸ್ತವ ಅವರು ಜ್ಯೋತಿ ಬೆಳಗುವುದರ ಮೂಲಕ ಉದ್ಘಾಟಿಸಿದರು ಬೆಂಗಳೂರಿನ ಡಾ॥ ನಾಗರತ್ನ, ಶ್ರೀಮತಿ ಗಂಗಮ್ಮ ಸಂಜೀವಯ್ಯ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಸಭೆಯನ್ನು ಕುಮಾರಿ ರಾ. ಸರಸ್ವತಿ ಅವರು ಸ್ವಾಗತಿಸಿ, ಶ್ರೀಮತಿ ದಾಕ್ಷಾಯಣಮ್ಮ ಅವರು ವಂದಿಸಿದರು

ಶಿಬಿರ ನಡೆಯುತ್ತಿದ್ದ ಕಾಲದಲ್ಲಿ ಬಳಗದ ಅಧ್ಯಕ್ಷೆ ಶ್ರೀಮತಿ ಗಂಗಮ್ಮ ಬಸವರಾಜ್ ಅವರು ಪತ್ರಕರ್ತರೊಂದಿಗೆ ಮಾತನಾಡುತ್ತ ಈಗಾಗಲೇ ಎಪ್ಪತ್ತೈದು ಮಹಿಳೆಯರು ಯೋಗಾಭ್ಯಾಸದಲ್ಲಿ ತೊಡಗಿರುವರೆಂದೂ, ಪ್ರತಿ ಸ್ತ್ರೀಯೂ ಯೋಗದ ಉದ್ದೇಶ, ಪ್ರಯೋಜನಗಳನ್ನು ತಿಳಿದು, ಹೆಚ್ಚು ಆರೋಗ್ಯ ಪೂರ್ಣವಾಗಿ ತಾನು ಬೆಳೆಯುವುದೇ ಅಲ್ಲದೇ ತನ್ನ ಮನೆಯವರನ್ನೂ ಪ್ರಾಚೀನ ಭಾರತೀಯ ಪರಂಪರೆಯ ಯೋಗ ವಿಜ್ಞಾನದ ಹಳಗಳ ಮೇಲೆ ನಡೆಸುವಂತೆ ಮಾಡುವುದೇ ಬಳಗದ ಉದ್ದೇಶವೆಂದೂ ತಿಳಿಸಿದರು.

( 37ನೇ ಪುಟದಿಂದ )

ನೂತನ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಯವರು ಚಿತ್ತಶುದ್ಧಿಯಿಂದ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತೇನೆಂದು ದೇವರೆದುರು ತಾವು ಪ್ರತಿಜ್ಞೆ ಮಾಡಿರುವುದಾಗಿಯೂ, ಅದನ್ನು ಅಕ್ಷರಶಃ ಪಾಲಿಸುವುದಾಗಿಯೂ ಘೋಷಿಸಿದರು. ಶ್ರೀ ಪ್ರಸಾದರಂತೆಯೇ ತಾವೂ ಅನೇಕ ಕಾರ್ಯಗಳನ್ನು ಮಾಡಬಯಸುತ್ತಿರುವುದಾಗಿಯೂ, ಸಾಧಿಸುವ ಆತ್ಮವಿಶ್ವಾಸ ತಮಗಿದೆಯೆಂದೂ ಪ್ರಕಟಿಸಿದರು.

ಶ್ರೀ ರಾಜಗೋಪಾಲರಾಜು ಅವರು ತಿ. ತಿ ದೇ. ಪ್ರಕಟನೆಗಳನ್ನು ಬಿಡುಗಡೆ ಮಾಡಿದರು. ಶ್ರೀ ಪ್ರಸಾದರು ಉದ್ಯೋಗಿಗಳ ಅಭಿನಂದನೆಗೆ ವಂದನೆ ಸಲ್ಲಿಸುವುದರಿಂದ ಸಭೆ ಮುಗಿಯಿತು

---

## ಸೆಪ್ಟೆಂಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 2, | ಗುರುವಾರ | ಅನಂತ ಪದ್ಮನಾಭ ವ್ರತ |
| 10 | ಶುಕ್ರವಾರ | ಮಧ್ವಾಷ್ಟಮಿ- |
| 17 | ಶುಕ್ರವಾರ | ಮಹಾಲಯ ಅಮಾವಾಸ್ಯೆ. |
| 19. | ಭಾನುವಾರ : | ಶ್ರೀವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ – ಅಂಕುರಾರ್ಪಣೆ. |
| 20. | ಸೋಮವಾರ | ಶ್ರೀವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ – ಧ್ವಜಾರೋಹಣ. |
| 24. | ಶುಕ್ರವಾರ : | ಶ್ರೀವೆಂಕಟೇಶ್ವರಸ್ವಾಮಿ ಗರುಡೋತ್ಸವ. |
| 27 | ಸೋಮವಾರ · | ಶ್ರೀವೆಂಕಟೇಶ್ವರಸ್ವಾಮಿ ರಥೋತ್ಸವ. |
| 28. | ಮಂಗಳವಾರ | ಶ್ರೀವೆಂಕಟೇಶ್ವರಸ್ವಾಮಿ ಅವಭೃತೋತ್ಸವ |

---


### ಸಪ್ತಗಿರಿ — ಸೆಪ್ಟೆಂಬರ್ 1982

**ಕಲ್ಲುಹಳ್ಳಿ ವೆಂಕಟರಮಣಸ್ವಾಮಿ,** – ಭ್ರಮರಾ.

**ಮಹಿಪತಿ ದಾಸರು,** – ಆದ್ಯರಾಮಾಚಾರ್ಯ.

**ತಿರುಮಲೆಯಲ್ಲಿ ಶ್ರೀಕೃಷ್ಣದೇವರಾಯ,** – ಡಾ॥ ಎಸ್. ಅನಂತರಂಗಾಚಾರ್.

**ವಿಗ್ರಹಾರಾಧನೆ,** – ನರಸಿಂಹ ಬ್ರಹ್ಮಚಾರಿ.

**ಸಾಧನ ಸಪ್ತಕ,** – ನಿರ್ಮಲಾಪ್ರಿಯ

**ಸದ್ಭಕ್ತಿ,** – ಸಿ ಎಸ್. ಕೃಷ್ಣಮೂರ್ತಿ.

**ಶ್ರೀಸ್ತುತಿ,** – ಜಿ. ಚೆನ್ನಯ್ಯ.

**ಗಂಗಾದೇವಿ,** – ಸಿ ವಿ. ಶೈಲಜ.

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ· ರೂ 1–00 ಮಾತ್ರ


## ಹಿಂದೂಧರ್ಮ ರಕ್ಷಣಾ ಸಂಸ್ಥೆಯ ಕಾರ್ಯಕ್ರಮಗಳು

### ಬೆಂಗಳೂರು

ಹಿಂದೂ ಧರ್ಮರಕ್ಷಣಾಸಂಸ್ಥೆಯ ಬೆಂಗಳೂರು ಶಾಖೆಯು ಕಳೆದ ಜೂನ್ ತಿಂಗಳಿನಲ್ಲಿ ವೈಯ್ಯಾಳಿಕಾವಲಿನ ಸಂಸ್ಥೆಯ ಆವರಣದಲ್ಲಿ ಹಲವಾರು ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿ ಜನಾನುರಾಗಿಯಾಯಿತು.

ದಿನಾಂಕ 5–6–82 ರಂದು ಶ್ರೀ ಕೆ ವಿ. ವೆಂಕಟನರಸಿಂಹಯ್ಯ ಅವರು ಅಂದು ನಡೆದ ದಾಸ ಸಾಹಿತ್ಯೋತ್ಸವದ ಅಂಗವಾಗಿ ದಾಸಸಾಹಿತ್ಯದ ಬಗ್ಗೆ ಸೋದಾಹರಣವಾಗಿ ಸ್ವಾರಸ್ಯವಾಗಿ ಉಪನ್ಯಾಸ ನೀಡಿದರು. ನಂತರ ಶ್ರೀ ಸಿ. ನಾಗರಾಜ ಮತ್ತು ಅವರ ಶಿಷ್ಯರಿಂದ ವೀಣಾವಾದನ ಸಭೆ ನಡೆಯಿತು

ಭಗವಾನ್ ಸತ್ಯ ಸಾಯಿಬಾಬಾ ಸೇವಾ ಮಂಡಳಿಯವರು 12–6–82 ರಂದು ಸಂಜೆ ಸಾಮೂಹಿಕ ಭಜನೆ, ಗಾಯನಗಳನ್ನು ನಡೆಸಿಕೊಟ್ಟರು.

ಶ್ರೀ ವಿ. ಅಶ್ವತ್ಥನಾರಾಯಣ ಅವರು ದಿನಾಂಕ 19–6–82 ರಂದು ಸಂಜೆ ದತ್ತಾವತಾರದ ಬಗ್ಗೆ ಸರಸವಾಗಿ ಬೋಧಪ್ರದವಾಗಿ ಹರಿಕಥೆ ನಡೆಸಿದರು.

ಶ್ರೀ ಪಿ. ಕೆ. ಶ್ರೀವತ್ಸ ಮತ್ತು ವೃಂದದವರಿಂದ ದಿನಾಂಕ 26–6–82 ರಂದು ವೀಣಾವಾದನ ಸಭೆ ನಡೆಯಿತು

ಶ್ರೀ ಕೆ ಟಿ. ರಂಗನಾಥದಾಸರು ದಿನಾಂಕ 21–6–82 ರಂದು ಶೇಷಾದ್ರಿಪುರದ ಕೋಡಿ ಮಹಾಗಣಪತಿ ದೇವಾಲಯದಲ್ಲಿ 'ಶಿವ ಚಿದಂಬರ ಮಹಾತ್ಮೆ' ಕಥೆಯನ್ನು ಸಂಸ್ಥೆಯ ಪರವಾಗಿ ನಡೆಸಿಕೊಟ್ಟರು.

ಅಸಂಖ್ಯ ಆಸ್ತಿಕ ಆಸಕ್ತರಿಂದ ಕೂಡಿದ ಈ ಎಲ್ಲ ಕಾರ್ಯಕ್ರಮಗಳೂ ಸಂಸ್ಥೆಯ ಬೆಂಗಳೂರು ಶಾಖೆಯ ಮ್ಯಾನೇಜರ್ ಶ್ರೀಅಧ್ಯಾಪಕ ಅವರ ಮುಂದಾಳ್ತನದಲ್ಲಿ ನಡೆದವು.

---

Edited and Published on behalf of the T T. Devastanams by K. Subba Rao, M. A., and Printed at T T. D Press by M Vijayakumar Reddy, Manager, T. T D Press, Tirupati - 517 501·

# ಶ್ರೀ ವೇಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

ವಿಶೇಷ ಪ್ರವೇಶ — ರೂ 25–00
(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ)

### ಸೇವೆಗಳು

| | | |
|---|---|---|
| 1 | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4. | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3000 |
| 7. | ತಿರುಪ್ಪಾವಡಾ[2] | ರೂ 6000 |
| 8 | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9 | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 10 | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.
* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ
2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು

ವಿವರಗಳಿಗೆ **ಪೇಷ್ಕಾರ್, ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ
ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75–00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | " | ರೂ [illegible]0–00 |
| ಎಸ್ ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು " | ರೂ 25–00 |
| ಒಂದು " | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೇಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

**ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.**

**ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.**

**ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.**

**ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.**

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

**ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.**

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.